# ಋತುಶಾಂತಿಕರ್ತೃತ್ವಾಧಿಕಾರಜಿಜ್ಞಾಸೆ

(ವಿದ್ವದಭಿಪ್ರಾಯಸಂಕಲನ)

ಸಂಕಲನೆ :

**ಯು. ಕೃಷ್ಣಶರ್ಮಾ**

ಪ್ರಸಾದ ಪ್ರಕಾಶನ

3. ಶ್ರೀ ಸುಬ್ರಹ್ಮಣ್ಯಸ್ವಾಮಿ ಮಂದಿರಂ
ವಿಶ್ವೇಶ್ವರಪುರಂ, ಬೆಂಗಳೂರು-4

1985

# ಋತುಶಾಂತಿಕರ್ತೃತ್ವಾಧಿಕಾರಜಿಜ್ಞಾಸೆ

(ವಿದ್ವದಭಿಪ್ರಾಯ ಸಂಕಲನ)

ಸಂಕಲನೆ :

**ಯು. ಕೃಷ್ಣಶರ್ಮಾ**

ಜುಲೈ : 1985

ಪ್ರಕಾಶಕರು

**ಪ್ರಸಾದ ಪ್ರಕಾಶನ**

3. ಸುಬ್ರಹ್ಮಣ್ಯಸ್ವಾಮಿ ಮಂದಿರಂ,
ವಿಶ್ವೇಶ್ವರಪುರಂ, ಬೆಂಗಳೂರು-4

ಮುದ್ರಕರು : ರುಕ್ಮಿಣಿ ಪ್ರಿಂಟರ್ಸ್ ಜಯನಗರ, ಬೆಂಗಳೂರು–11

ಈ ಜಿಜ್ಞಾಸೆಗೆ ಸಂಬಂಧ ಪಟ್ಟಂತೆ ತಮ್ಮ ತಮ್ಮ ಅಮೂಲ್ಯವಾದ ಪ್ರತಿಕ್ರಿಯೆ ಸೂಚಿಸುವಂತೆ ಎಲ್ಲ ವಿದ್ವಾಂಸರನ್ನು ಕೇಳಿಕೊಳ್ಳಲಾಗಿದೆ.

# ಪ್ರಕೃತ

ತಸ್ಮಾತ್ ಶಾಸ್ತ್ರಂ ಪ್ರಮಾಣಂ ತೇ

—ಶಾಸ್ತ್ರದೃಷ್ಟಿ

ಋತುಶಾಂತಿಯಲ್ಲಿ ತಂದೆಗೆ ಕರ್ತೃತ್ವಾಧಿಕಾರವಿದೆಯೋ ? ಇಲ್ಲವೇ ? ಎಂಬೀ ಜಿಜ್ಞಾಸೆ ಪ್ರಸ್ತುತವಾಗಿರುವುದು ಇದರ ಜಿಜ್ಞಾಸುಗಳೆಲ್ಲರಿಗೂ ತಿಳಿದಿರುವ ವಿಚಾರ. ವಿದ್ವದ್ವರೇಣ್ಯರಾದ ಮಾನ್ಯಶ್ರೀ ರಾಮಚಂದ್ರ ಶಾಸ್ತ್ರೀ ಸೂರೀ ಅವರು ತಮ್ಮ ವಿದ್ವತ್ಪೂರ್ಣವಾದ ಎರಡು ಲೇಖನಗಳಲ್ಲಿ (ಅಸಂಸ್ಕೃತಕನ್ಯಾರಜೋದೋಷಶಾಂತಿ' ವಿಮರ್ಶೆ, ಹಾಗೂ ಋತುಶಾಂತಿಕರ್ತೃತ್ವಾಧಿಕಾರಮೀಮಾಂಸೆ) 'ಶಾಸ್ತ್ರ ದೃಷ್ಟಿ-ಯಿಂದ ತಂದೆಗೆ ಋತುಶಾಂತಿಯಲ್ಲಿ ಕರ್ತೃತ್ವಾಧಿಕಾರವಿಲ್ಲವೆಂದು ತಮ್ಮದೇ ಆದ ರೀತಿಯಲ್ಲಿ ಪ್ರತಿಪಾದಿಸಿದ್ದಾರೆ.

ಯಾವುದೇ ವಿಷಯದ ವಿಚಾರಕ್ಕೆ ಹೊರಟಾಗ ವಿಭಿನ್ನದೃಷ್ಟಿಕೋಣಗಳ ಅಭಿಪ್ರಾಯಭೇದಗಳು ತಲೆದೋರುವದು ಸಹಜ. ಅನಿಸಿಕೆಗಳ ತಾಕಲಾಟ ಅನಿವಾರ್ಯ. ಅಂತೆಯೇ ಇಲ್ಲಿಯೂ ಕೂಡ ಋತುಶಾಂತಿಯಲ್ಲಿ ತಂದೆಗೆ ಕರ್ತೃತ್ವಾಧಿಕಾರವಿಲ್ಲವೇ ಇಲ್ಲ. ವಿವಾಹದ ಅನಂತರ ಗರ್ಭಾಧಾನಹೋಮದ ಪೂರ್ವದಲ್ಲಿ ಪತಿಯೇ ಈ ಶಾಂತಿಯನ್ನು ನೆರವೇರಿಸಬೇಕೆಂದು ಪ್ರಾಯಃ ಹೆಚ್ಚುಜನ ವಿದ್ವಾಂಸರ ಹಾಗೂ ಪುರೋಹಿತರ ಅಭಿಪ್ರಾಯ. ವಿವಾಹಪೂರ್ವದಲ್ಲೇ ಋತುಮತಿಯಾದ ಹುಡುಗಿಗೆ ಪ್ರಥಮರಜೋದರ್ಶನದ ಸಮಯದಲ್ಲಿ ಸಂಭವಿಸಿದ ದೋಷಗಳ ನಿವಾರಣೆಗಾಗಿ ಮದುವೆಗೆ ಮೊದಲೇ ಅಂದರೆ ಪ್ರಥಮರಜೋದರ್ಶನಶುದ್ಧಿಸ್ನಾನಾನಂತರ, ಐದನೇ ದಿನವೇ ಅವಳ ತಂದೆಯು ಈ ಶಾಂತಿಯನ್ನು ನೆರವೇರಿಸಬಹುದೆಂದು 'ಔಚಿತ್ಯ ದೃಷ್ಟಿಯಿಂದ' ಕೆಲವರು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. . ('ಶಾಸ್ತ್ರ ದೃಷ್ಟಿ' 'ಔಚಿತ್ಯದೃಷ್ಟಿ' ಎಂಬೀ ಪದಗಳನ್ನು ನಾನಿಲ್ಲಿ ಕೇವಲ ವ್ಯವಹಾರಸೌಕರ್ಯಕ್ಕಾಗಿ ಬಳಸಿದ್ದೇ ಹೊರತು, 'ಶಾಸ್ತ್ರದೃಷ್ಟಿ'ಯವರ ವಿವರಣೆಯಲ್ಲಿ ಶಾಸ್ತ್ರವಿರುದ್ಧವಾದ ಅಂಶವಿಲ್ಲವೆಂದಾಗಲೀ, ಔಚಿತ್ಯದೃಷ್ಟಿಯವರ ವಿವರಣೆಯು ಶಾಸ್ತ್ರವಿರುದ್ಧ

ವೆಂದಾಗಲಿ ಅರ್ಥವಲ್ಲ) ಮಾನ್ಯಶ್ರೀ ಎಚ್. ಡಿ. ರಾಮಕೃಷ್ಣಭಟ್ಟರ 'ಅಸಂಸ್ಕೃತ ಕನ್ಯಾರಜೋದೋಷಶಾಂತಿ ಎರಡು ಮುದ್ರಣಗಳು, ಹಾಗೂ ಶ್ರೀ ಶಾಸ್ತ್ರಿಗಳ ಲೇಖನ ಗಳ ಬಗೆಗೆ ಶ್ರೀ. ಭಟ್ಟರ ಪ್ರತಿಕ್ರಿಯೆಗಳನ್ನು ಇಲ್ಲಿ ಸ್ಮರಿಸಬಹುದು. ಹಾಗೆಯೇ ಪಂಡಿತ ಶ್ರೀ ಪುರೋಹಿತ ಶಂಕರನಾರಾಯಣ ಭಟ್ಟರು, ಪಂಡಿತಶ್ರೀ ಯಮುಂಜ ಶಂಕರ ಜೋಯಿಸರು ಅವರ ಅಭಿಪ್ರಾಯಗಳನ್ನು ಇಲ್ಲಿ ಮುಖ್ಯವಾಗಿ ಹೆಸರಿಸಬೇಕು.

'ಯಾವುದೇ ಕರ್ಮಕ್ಕೆ ಆ ಕರ್ಮದ ಫಲವು ತನಗೆ ಬೇಕೆಂದು ಬಯಸುವವನೇ ಅಧಿಕಾರಿಯಾಗುವನೆಂದು ಅಧಿಕಾರಲಕ್ಷಣ ಮೀಮಾಂಸೆಯಲ್ಲಿ ನಿರ್ಧರಿಸಿದೆ. 'ಸ್ವರ್ಗ ಕಾಮೋಯಜೇತ' ಇತ್ಯಾದಿ ಉದಾಹರಣೆಗಳು, ಇನ್ನೊಬ್ಬನಿಗೆ ಸ್ವರ್ಗವಾಗಲೆಂದು ಬಯಸುವವನೂ ಮತ್ತೊಬ್ಬನಿಗೆ ಆಯಾ ದೋಷಗಳು ನಿವಾರಣೆಯಾಗಲೆಂದು ಬಯಸುವವನೂ ಅಗ್ನಿಹೋತ್ರಾದಿ ಕರ್ಮಗಳಲ್ಲೂ ಪ್ರಾಯಶ್ಚಿತ್ತಾದಿ ಕರ್ಮಗಳಲ್ಲೂ ಅಧಿಕಾರಿಯಾಗನು ; ಲೋಕದಲ್ಲೂ ಹೀಗೆಯೇ'—ಅದ್ದರಿಂದ ಋತುಶಾಂತಿಯನ್ನು ಮಾಡಲು ತಂದೆಗೆ ಆಧಿಕಾರವಿಲ್ಲವೆನ್ನುತ್ತಾರೆ. ಮಾನ್ಯಶ್ರೀ ಶಾಸ್ತ್ರಿಗಳು, (ನೋಡಿ : ಋತುಶಾಂತಿಕರ್ತೃತ್ವಾಧಿಕಾರಮೀಮಾಂಸಾ') ಶಾಸ್ತ್ರಿಗಳು ಉದಾಹರಿಸಿದ ಈ ಮೇಲಿನ ಉತ್ಸರ್ಗ ಶಾಸ್ತ್ರಗಳನ್ನು ಅವುಗಳ ಪರಿಮಿತಿಯಲ್ಲಿ ಯಾರೂ ಅಲ್ಲಗಳೆಯ ಲಾರರು. ಆದರೆ ಇನ್ನೊಂದು ಸಣ್ಣ ಅಪವಾದಶಾಸ್ತ್ರವಿದೆ. ಅದನ್ನು ಇಲ್ಲಿಗೆ ಅನ್ವಯಿಸಿ ನೋಡಿದಾಗ ಮಾನ್ಯ ಶಾಸ್ತ್ರಿಗಳ ಹಾಗೂ ನಾಡಿನ ಹಿರಿಯ ವಿದ್ವಾಂಸರ ಪ್ರತಿಕ್ರಿಯೆ ಏನೆಂದು ತಿಳಿಯುವ ಉದ್ದೇಶದಿಂದ ಋತುಶಾಂತಿಕರ್ತೃತ್ವಾಧಿಕಾರ ಜಿಜ್ಞಾಸೆಗೆ ಸಂಬಂಧಪಟ್ಟಂತೆ ಈ ಚಿಕ್ಕ ಪುರವಣಿಯನ್ನು ಹೊರತರಲು ಪ್ರಯತ್ನಿಸ ಲಾಗಿದೆ.

ಋತುಶಾಂತಿಯು ದಶಾಸಂಧಿಶಾಂತಿಗಳಂತಹ ಒಂದು ಶಾಂತಿ. ವಿವಾಹದ ಪೂರ್ವದಲ್ಲಿ ಹುಡುಗಿಯು ರಜಸ್ವಲೆಯಾದಾಗ ಏನಾದರೂ ಕಾಲದೋಷವಿದ್ದಲ್ಲಿ ಅದರ ಪರಿಹಾರಕ್ಕಾಗಿ ಈ ಶಾಂತಿ ಮಾಡಲು ತಂದೆಯು ಯಾಕೆ ಅಧಿಕಾರಿಯಾಗ ಬಾರದು ? ಇಲ್ಲಿನ ಶಾಸ್ತ್ರರಹಸ್ಯವೇನು ? ದಶಾಸಂಧಿಶಾಂತಿಗೂ ಋತುಶಾಂತಿಗೂ ಇರುವ ಮುಖ್ಯ ವ್ಯತ್ಯಾಸವೆಂದರೆ ಋತುಶಾಂತಿಯು ಹೆಣ್ಣು ಮಕ್ಕಳಿಗೆ ಮಾತ್ರ ಸಂಬಂಧ ಪಡುತ್ತದೆ ಅಷ್ಟೇ.

ಈ ಋತುಶಾಂತಿಯಲ್ಲಿ ತಂದೆಗೆ ಕರ್ತೃತ್ವಾಧಿಕಾರವಿಲ್ಲವೇ ಇಲ್ಲೆಂದು ಕೇವಲ ಶಪಥಮಾತ್ರದಿಂದ ನಿಷೇಧಿಸುವ ವಿದ್ವಾಂಸರು ಕೆಲವರು ಇಲ್ಲಿ ತಮ್ಮದೇ ಆದ ರೀತಿ ಯಲ್ಲಿ ಸಮಾಧಾನ ಹೇಳುತ್ತಾರೆ. ಹುಡುಗಿಯು ಮದುವೆಗೆ ಮುಂಚೆ ಮೈನೆರೆದು ಮನೆಯಲ್ಲಿ ಕುಳಿತಾಗ ಅವಳು ವೃಷಲಿಯೆನಿಸುವದರಿಂದ ತಂದೆತಾಯಿಗಳು ವೃಷಲೀ

ಪಿತೃಗಳಾಗುತ್ತಾರೆ. ಮಗಳಿಗೆ ಮದುವೆಯಾಗುವವರೆಗೂ ಅವರು ಅಶುಚಿಯೆನಿ ಸುತ್ತಾರೆ. **'ಪ್ರೊತಃ ಸನ್ ಪಾವಯತಿ'** ಕಾರಣ ಋತುಶಾಂತಿಯಲ್ಲಿ ತಂದೆಗೆ ಕರ್ತೃತ್ವಾಧಿಕಾರವಿಲ್ಲ. ಆದಷ್ಟು ಬೇಗ ಮಗಳನ್ನು ಮದುವೆಮಾಡಿ ಕೊಡುವುದೇ ತಂದೆಗೆ ಆದ್ಯಕರ್ತವ್ಯ-ಎನ್ನುತ್ತಾರೆ ಪ್ರಸಿದ್ಧ ವಿದ್ವಾಂಸರೊಬ್ಬರು.

ಋತುಶಾಂತಿಯೆಂಬುದು ಕ್ಷೇತ್ರಗತದೋಷಾಪಾಕರಣಪೂರ್ವಕವಾದ ಕ್ಷೇತ್ರದ ಉರ್ವರೀಕರಣರೂಪವಾದ ಒಂದು ಸಂಸ್ಕಾರ. ಈ ಸಂಸ್ಕಾರದಲ್ಲಿ ಕ್ಷೇತ್ರದ ಭೋಕ್ತೃವಿಗೇ ಅಧಿಕಾರವೇ ಹೊರತು ಬೇರೆಯವರಿಗೆ ಅಧಿಕಾರವಿಲ್ಲ. ಇಲ್ಲಿ ಪತಿಯೇ ಭೋಕ್ತೃವಾದುದರಿಂದ ಅವನು ಮಾತ್ರವೇ ಋತುಶಾಂತಿಯಲ್ಲಿ ಕರ್ತೃ ವಾಗಲು ಅಧಿಕಾರಿ. ತಂದೆಯಾಗಲಾರನು-ಎಂಬುದು ಒಬ್ಬರವಾದ.

ಗರ್ಭಾಧಾನಹೋಮದ ಅವ್ಯವಹಿತಪೂರ್ವದಲ್ಲಿ ಈ ಶಾಂತಿಯನ್ನು ವಿಧಿಸಿ ರುವುದರಿಂದ ಇದರಲ್ಲಿ ಪತಿಯೇ ಕರ್ತೃವೆಂಬುದು ಪ್ರಯೋಗಕಾರರ ಅಭಿಪ್ರಾಯ. ಇದಕ್ಕಿಂತ ಹೆಚ್ಚಿನ ಪ್ರಾಮಾಣವಿನ್ನೇನು ಬೇಕು ? ಎನ್ನುತ್ತಾರೆ ಇನ್ನೊಬ್ಬರು.

'ಪ್ರಯೋಗಕಾರರು ಬರೆದದ್ದನ್ನು ಪ್ರಶ್ನಿಸುವ ಅಧಿಕಾರ ನಮಗಿಲ್ಲ. ನಮ್ಮ ತಾತ, ಮುತ್ತಾತಂದಿರ ಮುತ್ತಾತರೂ ಕೂಡ ಪತಿಯ ಕೈಯಿಂದಲೇ ಋತುಶಾಂತಿ ಯನ್ನು ಮಾಡಿಸುತ್ತಿದ್ದರಂತೆ, ನಾವು ಕೂಡ ಇಂದಿಗೂ ಅವರಂತೆಯೇ ಪತಿಯ ಕೈ ಯಿಂದಲೇ ಋತುಶಾಂತಿ ಮಾಡಿಸುತ್ತಿದ್ದೇವೆ. ನಿಮ್ಮ ಶಾಸ್ತ್ರ ನಮಗೆ ಅರ್ಥವಾಗು ದಿಲ್ಲ' ಎನ್ನುತ್ತಾರೆ ನಮ್ಮೂರಿದ ಹಿರಿಯ ಪುರೋಹಿತರೊಬ್ಬರು.

ಋತುಶಾಂತಿಯಲ್ಲಿ ತಂದೆಗೂ ಕರ್ತೃತ್ವಾಧಿಕಾರವಿದ್ದಿದ್ದರೆ ನಮ್ಮ ಹಿಂದಿನ ತಲೆಮಾರಿನವರು ಅದನ್ನು ಬಳಕೆಗೆ ತರುತ್ತಿರಲಿಲ್ಲವೇ ? ತಂದೆಗೂ ಅಧಿಕಾರವಿದೆ ಯೆಂಬ ಈ ಹೊಸ ವಿಚಾರವು ಇಂದು ನಿಮ್ಮ ತಲೆಗೆ ಮಾತ್ರ ಹೊಳೆಯಿತೆಂದ ಮೇಲೆ ನೀವು 'ಅಭಿನವಬೃಹಸ್ಪತಿ'ಗಳೇ ಇರಬೇಕು, ಎಂದು ಹೇಳುತ್ತಾರೆ. ಇನ್ನೊಬ್ಬ ಕಿರಿಯ ವಿದ್ವಾಂಸರು.

ಅದ್ಭುತ (ಭಯಂಕರ) ಸಂಶೋಧನೆ ಮಾಡಿದವರಂತೆ ಬೊಬ್ಬೆ ಹಾಕಹತ್ತಿದ ಇವರು (ತಂದೆಗೂ ಋತುಶಾಂತಿಯಲ್ಲಿ ಕರ್ತೃತ್ವಾಧಿಕಾರವಾದಿಗಳು) ದಿಢೀರನೆ ಹೆಸರು ಗಳಿಸುವ ಉದ್ದೇಶದಿಂದ ಸುಳ್ಳು ಸುಳ್ಳೇ ಏನೇನೋ ಬುರುಡೆ ಬಿಡುತ್ತಿದ್ದಾರೆ. ಇಂತಹ ಅಶಾಸ್ತ್ರೀಯವಾದ ವಾದವನ್ನು ನಾವು ಇದು ವರೆಗೂ ಎಲ್ಲೂ ಕೇಳಿರಲಿಲ್ಲ. ಪ್ರಯೋಗವನ್ನೇ ಬದಲಾಯಿಸಹೊರಟ ಇವರು ಇನ್ನೇನೇನು ಅನಾಹುತ ಮಾಡು ತ್ತಾರೋ ! ಎಂದು ನನ್ನ ಮಿತ್ರರೊಬ್ಬರು ತಮ್ಮ ದುಃಖವನ್ನು ತೋಡಿಕೊಂಡರು.

ದಶಾಸಂಧಿಯಲ್ಲಿ ತಂದೆ-ತಾಯಿಗಳಿಗೂ ವಿಪತ್ತು ತಾಗುತ್ತದೆಂದು ಶಾಸ್ತ್ರಗಳಲ್ಲಿ ಹೇಳಿದ್ದರಿಂದ ಅಲ್ಲಿ ಮಾತ್ರ ತಂದೆಗೆ ಕರ್ತೃತ್ವಾಧಿಕಾರವಿದೆ. ಪ್ರಥಮರಜೋದರ್ಶನಕಾಲದ ದೋಷಗಳಾದರೋ ತಂದೆ–ತಾಯಿಗಳಿಗೆ ಸಂಬಂಧ ಪಡುವದಿಲ್ಲ. ಅವು ಗಂಡನಿಗೆ ಮಾತ್ರ ಕೆಡಕು ಮಾಡುವದರಿಂದ ಆ ದೋಷಗಳನ್ನು ಹೋಗಲಾಡಿಸಲು ಮಾಡುವ ಋತುಶಾಂತಿಯಲ್ಲಿ ಪತಿಯೇ ಕರ್ತೃವಾಗಬೇಕು. ಮದುವೆಗೆ ಮೊದಲು ಈ ಶಾಂತಿಯನ್ನು ಮಾಡಲು ಎಲ್ಲಿ ಹೇಳಿದೆ ? ನಿನಗೆಲ್ಲೋ ಹುಚ್ಚು ! ಎಂದು ಹಿರಿಯ ವಿದ್ವಾಂಸರೊಬ್ಬರು ನನಗೆ ಇಲ್ಲಿ ವಸ್ತುಸ್ಥಿತಿಯನ್ನು ಮನವರಿಕೆ ಮಾಡಿ ಕೊಟ್ಟರು.

ಪತಿ-ಪತ್ನಿಯರಲ್ಲಿ ಪರಸ್ಪರ ಭೋಕ್ತೃ-ಭೋಗ್ಯತ್ವ ರೂಪದ ಸಂಬಂಧವಿದೆ. ಭೋಗಕ್ಕೆ ಮುಂಚೆ ಭೋಗ್ಯವಸ್ತುವಿನ ದೋಷವನ್ನು ಭೋಕ್ತೃವೇ ದೂರ ಮಾಡಿಕೊಳ್ಳಬೇಕಷ್ಟೇ. ಅಂದ ಬಳಿಕ ಋತು ಶಾಂತಿಯಲ್ಲಿ ಕರ್ತೃತ್ವಾಧಿಕಾರ ಯಾರಿಗೇಂತ್ರ ಸಿದ್ಧವಾದಂತಾಯಿತು ? ನೀವೇ ಹೇಳಿ ! ಎಂಬುದು ನಮ್ಮೂರ ದೇವದತ್ತ ಶಾಸ್ತ್ರಿಗಳ ಸವಾಲು

ಪ್ರಯೋಗ ಹಾಗೂ ಧರ್ಮಶಾಸ್ತ್ರಗಳಲ್ಲಿ ಪತಿಯು ಋತುಶಾಂತಿಯಲ್ಲಿ ಕರ್ತೃವೆಂದು ತಿಳಿಸಿದ್ದಾರೆ. ಎಲ್ಲಿ ನೋಡೋಣ ಇದೇ ರೀತಿ 'ಮದುವೆಗೆ ಮೊದಲು ಮಗಳಿಗೆ ತಂದೆಯೇ ಋತುಶಾಂತಿಯನ್ನು ನೆರವೇರಿಸಬಹುದೆಂಬುದಕ್ಕೆ ಪ್ರಮಾಣವಾಗಿ ಒಂದೇ ಒಂದು ವಾಕ್ಯವನ್ನು ಉದಾಹರಿಸಿ" ಎಂಬುದಾಗಿ ಪುರೋಹಿತರೆಲ್ಲರೂ ಒಟ್ಟಿಗೇ ಸವಾಲೆಸೆಯುತ್ತಾರೆ.

ಹೊತ್ತು ಹೋಗದಿದ್ದಲ್ಲಿ ಒಂದಿಷ್ಟು ಹಾಳೆ ಕೈಗೆತ್ತಿಕೊಂಡು ರಾಮನಾಮವನ್ನಾದರೂ ಬರೆದರೆ ಅಷ್ಟು ಪುಣ್ಯ ಬರುತ್ತೆ. ಕೆಲಸವಿಲ್ಲದ ಬಡಗಿಯಂತೆ ಈ ಋತುಶಾಂತಿಯ ಕರ್ತೃತ್ವಾಧಿಕಾರವಿಚಾರಕ್ಕೆ ನೀನೇಕೆ ಉಂತೆ ಕೈ ಹಾಕಿದೆ ? ಎಂದು ನನ್ನ ಹಿತಚಿಂತಕರೊಬ್ಬರು ಸಲಹೆ ಮಾಡುತ್ತಾರೆ. 'ಸ್ಥಿತಸ್ಯ ಗತಿಶ್ಚಿಂತನೀಯಾ' ಎಂಬೊಂದು 'ಮಹಾಶಾಸ್ತ್ರ-ವಾಕ್ಯ'ವು 'ಅನುಕೂಲಸಿಂಧು ವಿನಲ್ಲಿ ಉಲ್ಲಿಖಿತವಾಗಿದೆ. ಅದರ ಪ್ರಕಾರ ಎಲ್ಲಿಗೆ ಯಾವ ಸಮಾಧಾನವು ಅನ್ವಯಿಸುತ್ತೋ ಆಯಾ ಸಮಾಧಾನ ಹಾಗೂ ಯುಕ್ತಿಗಳನ್ನು ಅನ್ವಯಿಸಿಕೊಳ್ಳಬೇಕೆಂದು ಶಾಸ್ತ್ರವೇ ? ಅನುಜ್ಞೆ ನೀಡಿದೆಯೆಂದು ವಿಚಾರವಾದಿಗಳೊಬ್ಬರ ಅಭಿಪ್ರಾಯ.

ಹೀಗೆ, ಹಲವು ಹತ್ತು ಬಗೆಯ ಬುಡವಿಲ್ಲದ ಆಕ್ಷೇಪಗಳು ಒತ್ತಟ್ಟಿಗಿರಲಿ, "ಋತು ಶಾಂತಿಯಲ್ಲಿ ತಂದೆಗೆ ಕರ್ತೃತ್ವಾಧಿಕಾರವನ್ನು ಪ್ರಯೋಗಕಾರರು ಹೇಳಿಲ್ಲ"

ಎಂಬೀ ಒಂದು ಅಂಶವನ್ನು ಮಾತ್ರ ಇಲ್ಲಿ ಗಮನಿಸಬೇಕಾದ್ದಿದೆ. ಅದಗ್ಗೆ ಸಮಾಧಾನವೂ ಇಲ್ಲದಿಲ್ಲ.

ಇಲ್ಲಿ ತಂದೆಗೂ ಕರ್ತೃತ್ವಾಧಿಕಾರ ಸಿದ್ಧವಾಗಬೇಕೆಂಬ ಆಗ್ರಹವೇನೂ ನನಗಿಲ್ಲ. ಸಿದ್ಧವಾದರೂ ಕೂಡ ಇದೀಗ ಹೊಸದಾಗಿ ಆ ಆಚರಣೆಯನ್ನು ಬಳಕೆಗೆ ತರುವದಂತೂ ಅಸಾಧ್ಯದ ಮಾತು, ಪ್ರಕೃತ, ನನ್ನ ಉದ್ದೇಶವಿಷ್ಟೇ : ಪ್ರಸಂಗವಶಾತ್ ಜಿಜ್ಞಾಸೆ ಹುಟ್ಟಿಕೊಂಡಿತು. ಈ ಜಿಜ್ಞಾಸೆಗೊಂದು **ಪ್ರಾಮಾಣಿಕ ಸಮಾಧಾನ** ಕಂಡುಕೊಳ್ಳಬೇಕೆಂಬುದಿಷ್ಟೇ **ಪ್ರಕೃತ**

> ಕೇವಲಂ ಶಾಸ್ತ್ರಮಾಶ್ರಿತ್ಯ ನ ಕರ್ತವ್ಯೋ ವಿನಿರ್ಣಯಃ ।
> ಯುಕ್ತಿಹೀನವಿಚಾರೇ ತು ಧರ್ಮಹಾನಿಃ ಪ್ರಜಾಯತೇ ॥

—ಔಚಿತ್ಯದೃಷ್ಟಿ

० ० ० ०

ಋತುಶಾಂತಿಕರ್ತೃತ್ವಾಧಿಕಾರ ಜಿಜ್ಞಾಸೆಯ ವಿಷಯದಲ್ಲಿ ವಿದ್ವತ್ಪೂರ್ಣವಾದ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸಿದ ವಿದ್ವಾಂಸರೆಲ್ಲರಿಗೂ ಧನ್ಯವಾದಗಳು, ಪ್ರತಿಕ್ರಿಯೆ ತಿಳಿಸುವಂತೆ ಕೇಳಿಕೊಂಡಾಗ 'ಆಗಲಿ' ಎಂದು 'ದಾಕ್ಷಿಣ್ಯದ' ಒಪ್ಪಿಗೆ ಸೂಚಿಸಿಯೂ ಪುನಃ ಹೋದಾಗ ಲಿಖಿತರೂಪದಲ್ಲಿ ಪ್ರತಿಕ್ರಿಯೆ ವ್ಯಕ್ತಪಡಿಸಲು ಕೆಲವರು ನಿರಾಕರಿಸಿದ್ದುಂಟು, ಏಕೆಂದರೆ ಇದು 'ರಜೋದೋಷ-ವಿಚಾರ' **'ಪ್ರಕ್ಷಾಳನಾದ್ಧಿ ಪಂಕಸ್ಯ ದೂರಾದಸ್ಪರ್ಶನಂ ವರಂ'**—ಎಂಬಂತೆ ಇಂತಹ ವಿಚಾರದಲ್ಲಿ ವಿದ್ವಾಂಸರ ಔದಾಸೀನ್ಯ ಸಹಜ. ಅದೂ ಅಲ್ಲದೇ ಇದೊಂದು ದೊಡ್ಡ 'ಅರ್ಥ' ಜಿಜ್ಞಾಸೆಯೇ ಅಲ್ಲ ಎಂದು ಹಲವರ ಅಭಿಪ್ರಾಯ. ಇಂತಹ ವಿವಾದಾಸ್ಪದ ವಿಚಾರಕ್ಕೆ ಕೈ ಹಾಕಿ ತಲೆಕೆಡಿಸಿಕೊಳ್ಳಬಾರದೆಂದು' ಔದಾಸೀನ್ಯಯೋಗಾರೂಢ'ರೊಬ್ಬರ ಉಪದೇಶ ನನಗೆ ತುಂಬಾ ಮೆಚ್ಚಿಗೆಯಾಯಿತು. 'ಮಹಾ ಜನೋ ಯೇನ ಗತಃ ಸ ಪಂಥಾಃ'

ಪ್ರೌಢ ವಿವಾಹವು ಬಳಕೆಗೆ ಬಂದಿರುವ ಇಂದು ಹೆಣ್ಣುಮಕ್ಕಳು ಋತುಮತಿಯರಾದಾಗ ಸಂಭವಿಸಿರಬಹುದಾದ 'ಕಾಲದೋಷ'ಗಳ ನಿವಾರಣೆಗಾಗಿ ತಂದೆಯು ಈ 'ಋತುಶಾಂತಿ'ಯನ್ನು ನೆರವೇರಿಸಲು ಅಧಿಕಾರಿಯಾಗಬಹುದೇ ? ಇಲ್ಲವೇ ? ಎಂಬೀ ಜಿಜ್ಞಾಸೆಗೆ ಸಂಬಂಧಪಟ್ಟಂತೆ ವಿದ್ವಾಂಸರು ತಮ್ಮ ತಮ್ಮ ಪ್ರಾಮಾಣಿಕ ಪ್ರತಿಕ್ರಿಯೆಗಳನ್ನು ಸೂಚಿಸಿ ಉಪಕರಿಸಬೇಕೆಂದು ಇಲ್ಲಿ ಮತ್ತೊಮ್ಮೆ ಪ್ರಾರ್ಥಿಸಿಕೊಳ್ಳುತ್ತೇನೆ.

ಪೂರ್ವಮೀಮಾಂಸಾಶಾಸ್ತ್ರದ ವೈಶ್ವಾನರೇಷ್ಟ್ಯಧಿಕರಣದ ನ್ಯಾಯವನ್ನು ಪ್ರಕೃತಕ್ಕೆ ಅಳವಡಿಸುವಲ್ಲಿ ಮಾರ್ಗದರ್ಶನ ನೀಡಿ ಉಪಕರಿಸಿದ ನನಗೆ ಪೂಜ್ಯ ವಿದ್ವಾ

ಗುರುಗಳಾದ. ಪಂಡಿತ ಪ್ರವರ, ವಿದ್ವಾನ್ ಬಿ. ರಾಮಭಟ್ಟರು 'ಪಂಡಿತ ಪ್ರವರ ವಿದ್ವಾನ್ ಶ್ರೀ ಕೆ. ಕೃಷ್ಣ ಜೋಯಿಸರ್ ಅವರಿಬ್ಬರಿಗೂ ನನ್ನ ಕೃತಜ್ಞತೆಯ ವಂದನೆಗಳು.

ಈ ಜಿಜ್ಞಾಸೆಗೆ ಸಂಬಂಧ ಪಟ್ಟಂತೆ ವಿದ್ವತ್ಪೂರ್ಣವಾದ ತಮ್ಮ ತಮ್ಮ ಪ್ರತಿಕ್ರಿಯೆಗಳನ್ನು ಸೂಚಿಸಿದ ಮಾನ್ಯ ವಿದ್ವಾಂಸರಿಗೂ ಬೇರೆ ಕಡೆಗೆ ಪ್ರಕಟವಾಗಿದ್ದು ನಾನಿಲ್ಲಿ ಎತ್ತಿಕೊಂಡ ಅಭಿಪ್ರಾಯಗಳ ವಿದ್ವಲ್ಲೇಖಕರಿಗೂ ನನ್ನ ಕೃತಜ್ಞತೆಗಳು.

ಮೊದಲಿನಿಂದಲೂ ವಿಶೇಷವಾದ ಆಸಕ್ತಿಯೊಂದಿಗೆ ಈ ಜಿಜ್ಞಾಸೆಯ ನೇತೃತ್ವ ವಹಿಸಿ 'ಶಾಸ್ತ್ರೀಯದೃಷ್ಟಿ'ಯ ಸಮಾಧಾನ ಸೂಚಿಸಿ ಉಪಕರಿಸುತ್ತಿರುವ ನನಗೆ ಪೂಜ್ಯರಾದ ವಿದ್ವಾನ್ ಶ್ರೀರಾಮಚಂದ್ರ ಶಾಸ್ತ್ರಿಗಳು ಸೂರೀ ಅವರಿಗೆ ನಾನು ವೈಯುಕ್ತಿಕವಾಗಿ ಗೌರವ ಧನ್ಯವಾದಗಳನ್ನು ಅರ್ಪಿಸುತ್ತೇನೆ.

—ಯು. ಕೃಷ್ಣಶರ್ಮಾ

ವಿದ್ವಾನ್ ರಾಮಚಂದ್ರ ಶಾಸ್ತ್ರಿಗಳು ಸೂರಿ
ಸುಪ್ರಸಿದ್ಧ ವಿದ್ವಾಂಸರು ; ಕವಲಕ್ಕಿ
P.O ಭಾಸ್ಕೇರಿ. ಹೊನ್ನಾವರ. ಉ. ಕ. 581334

# ಋತುಶಾಂತಿಕರ್ತೃತ್ವಾಧಿಕಾರವಿಚಾರ

'ಅಸಂಸ್ಕೃತಕನ್ಯಾರಜೋದೋಷಶಾಂತಿ' ಎಂಬ ಲೇಖನವನ್ನು ಅವಲೋಕಿಸಿದೆನು. ಲೇಖನದ ತಲೆಬರಹವೇ ಅಸಂಬದ್ಧವಾಗಿದೆ, ಸ್ತ್ರೀಯರಿಗೆ ರಜಸ್ಸು ಬರುವದು ದೋಷವಲ್ಲ. ಅದು ಸ್ವಾಭಾವಿಕವಾದುದು. ಆ ರಜಸ್ಸು ದರ್ಶನವಾದ ಕಾಲವು, ಅಸಂಸ್ಕೃತಕನ್ಯೆಯಾದುದರಿಂದ ರಜೋದರ್ಶನವೂ ಪತಿ ಮತ್ತು ತಂದೆ ತಾಯಿಗಳಿಗೆ ದೋಷಕ್ಕೆ ಕಾರಣವಾಗುವದು. ಆದುದರಿಂದ ರಜೋದೋಷಶಾಂತಿ ಎಂಬ ತಲೆಬರಹವೇ ಅಸಂಗತವಾಗಿದೆ.*

ಹೇಮಾದ್ರಿ ಮೊದಲಾದ ಎಲ್ಲ ಧರ್ಮಗ್ರಂಥಗಳಲ್ಲೂ ಅವಿವಾಹಿತಕನ್ಯೆಯನ್ನೇ ಅಸಂಸ್ಕೃತಾ' ಎಂದು ಕರೆದಿದ್ದಾರೆ. ಅಸಂಸ್ಕೃತಕನ್ಯಾರಜೋದರ್ಶನ ಶಾಂತಿಯನ್ನು ಬರೆದಿದ್ದಾರೆ.* ಇಲ್ಲಿಯೂ ಈ ಲೇಖಕರು 'ಅಸಂಸ್ಕೃತ' ಎಂಬ ಪದದ ಅರ್ಥವನ್ನು ಮಿಶ್ರೀಕರಿಸಿ ಬಳಸಿಕೊಂಡಿದ್ದಾರೆ. ಕೇವಲ ಕರ್ಣವೇಧಾಂತ ಸಂಸ್ಕಾರವಾಗದಿದ್ದ ಕನ್ಯೆಯನ್ನು ಮಾತ್ರ ಅಸಂಸ್ಕೃತಳೆಂದು ಯಾವ ಧರ್ಮ ಶಾಸ್ತ್ರದಲ್ಲಿಯೂ ಕರೆದಿಲ್ಲ. ಆದ್ದರಿಂದ ಅವಿವಾಹಿತಕನ್ಯೆಯೇ 'ಅಸಂಸ್ಕೃತಾ' ಎಂದು ತಿಳಿಯತಕ್ಕದ್ದು.

ಕರ್ಣವೇಧಾಂತ ಸಂಸ್ಕಾರವಾಗಿದ್ದು ಅವಿವಾಹಿತಳಾಗಿದ್ದರೆ ಆಕೆಯು ಸುಸಂಸ್ಕೃತಳೆಂಪೂ, ಆಕೆಯು ರಜಸ್ವಲೆಯಾದರೆ ಯಾರಿಗೂ ಏನೂ ದೋಷವಿಲ್ಲೆಂದೂ ಯಾವ ಧರ್ಮಶಾಸ್ತ್ರಗಳಲ್ಲಿಯೂ ಬರೆದಿಲ್ಲ. ಆಗಲೂ ತಂದೆ-ತಾಯಿಗಳು ದೋಷಿಗಳೇ, ಆಕೆಯು ವೃಷಲಿಯೇ, ಆಕೆಯ ವಿವಾಹ ಮಾಡಿಕೊಂಡ ಪತಿಯು ವೃಷಲನೇ ಅವಿವಾಹಿತಕನ್ಯೆಯು ಪ್ರಥಮ ರಜಸ್ವಲೆಯಾದಾಗ ಹಾಗೂ ಮುಂದೆ ಪ್ರತಿ ತಿಂಗಳು ರಜಸ್ವಲೆಯಾದಾಗಲೂ ಆ ರಜಸ್ಸನ್ನು ಪಿತೃಗಳಿಗೆ ಕುಡಿಸುತ್ತಾರೆ ಹಾಗೂ ಆ ಪಿತೃಗಳು ನರಕಕ್ಕೆ ಹೋಗುತ್ತಾರೆಂದು ವಚನಗಳು ಸಾರುತ್ತವೆ. ಆದ್ದರಿಂದಲೇ ಧರ್ಮಗ್ರಂಥಗಳಲ್ಲಿ ವಿವಾಹಕ್ಕಿಂತ ಮೊದಲು ಎಷ್ಟು ಸಲ ಕನ್ಯೆಯು ಋತುಮತಿಯಾಗು

ವಳೋ ಅಷ್ಟು ಸಂಖ್ಯೆಯ ಗೋದಾನವನ್ನು ತಂದೆಯು ಕನ್ಯಾದಾನಕ್ಕಿಂತ ಮೊದಲು ಮಾಡಿಕೊಳ್ಳಬೇಕೆಂದು ಹೇಳಿದೆ. ಅದರಿಂದ ವೃಷಲೀತ್ವ ಹೊರತಾಗಿ ಎಲ್ಲ ದೋಷಗಳೂ ನಿವೃತ್ತಿಯಾಗುತ್ತವೆ. ಮತ್ತು 'ಪ್ರಾಣಿಗ್ರಹೋ ವಿಧಿಃ ಸ್ತ್ರೀಣಾಮೌಪನಾಯನಿಕಃ ಸ್ಮೃತಃ ಎಂಬುದೇ ಮೊದಲಾದ ವಚನಗಳಂತೆ ಆಕೆಯು ಅನುಪನೀತನ ಸ್ಥಾನ ಪಡೆಯುತ್ತಾಳೆ. ಅವಳು ಕನ್ಯೆಯರಿಗಾಗಿಯೇ ಹೇಳಿದ ವ್ರತನಿಯಮಗಳನ್ನು ಮಾತ್ರ ಮಾಡಬಹುದೇ ಹೊರತು ಯಾವ ಹವ್ಯಕವ್ಯಗಳ ಪಾಕಾದಿಗಳಲ್ಲಿ ಅನರ್ಹಳು.

## ಪ್ರಥಮರಜೋದರ್ಶನಶಾಂತಿ

ಇದು ಸಂಸ್ಕಾರವಲ್ಲ. ಕನ್ಯೆಯು ಪ್ರಥಮ ರಜಸ್ವಲೆಯಾದ ಸಂದರ್ಭದಲ್ಲಿ ಮಾಸ, ತಿಥಿ, ವಾರ, ನಕ್ಷತ್ರ ಮುಂತಾದವು ದುಷ್ಟವಾಗಿದ್ದರೆ ಆಕೆಯು ಮುಂದೆ ಮಹಾದುಃಖಿಯಾಗುವಳು. ಪತಿಘ್ನೀ, ಬಾಲಘ್ನೀ, ಜಾರಿಣೀ. ದರಿದ್ರಾ, ರೋಗಪೀಡಿತಾ, ಮುಂತಾದ ದೋಷಗಳಿಗೆ ಗುರಿಯಾಗುವಳು. ಅದರ ಪರಿಹಾರಕ್ಕೆ ಆಚಾರ್ಯರು ಶಾಂತಿ ಸೂಕ್ತಪಠನ, ಮತ್ತು ಶಾಂತಿಹೋಮಗಳನ್ನು ವಿಧಿಸಿದ್ದಾರೆ.

ಈ ಶಾಂತಿಗೆ ಪತಿಯೇ ಅಧಿಕಾರಿಯಾಗುವನು. ಏಕೆಂದರೆ ಶಾಸ್ತ್ರಗಳಲ್ಲಿ ಪತಿಪತ್ನಿಯರಿಗೆ ಸಹ ಧರ್ಮಾಧಿಕಾರವನ್ನು ಹೇಳಿದೆ. ತನ್ನ ಪತ್ನಿಗೆ ಪ್ರಥಮ ರಜೋದರ್ಶನಕಾಲದ ನಿಮಿತ್ತ ಬರಬಹುದಾದ ಮೇಲೆ ಹೇಳಿದ ದೋಷಗಳಿಗೆ ಶಾಂತಿಗಳನ್ನು ಮಾಡಿಕೊಳ್ಳುವ ಅಧಿಕಾರವು ಪತಿಗೆ ಇರುತ್ತದೆ. ಹಾಗೂ ರಜೋದರ್ಶನವು ಪ್ರತಿ ತಿಂಗಳೂ ಉಂಟಾಗುವುದರಿಂದ ಆ ದೋಷಗಳು ಮತ್ತಷ್ಟು ಧೃಢವಾಗುತ್ತವೆ. ಆದುದರಿಂದ ವಿವಾಹವಾದೊಡನೆ ಆ ಹಿಂದಿನ ಎಲ್ಲ ದೋಷಗಳನ್ನೂ ನಿವೃತ್ತಿಮಾಡಿಕೊಳ್ಳಲು ಪತಿಯೇ ಅಧಿಕಾರಿಯಾಗುವನು. ಮತ್ತು 'ಸಾ ಕನ್ಯಾ ವೃಷಲೀ ಜ್ಞೇಯಾ ತತ್ಪತಿಃ ವೃಷಲಃ ಸ್ಮೃತಃ' ಎಂಬ ವಚನವನ್ನು ವಿಮರ್ಶಿಸಿದಾಗ ಎಂದಿಗೂ ಅಂಥ ಕನ್ಯೆಯು ವೃಷಲಿಯೇ, ಆ ಪತಿಯು ವೃಷಲನೇ ಎಂಬುದು ತಿಳಿದು ಬರುವದು. ಮೊದಲೇ ತಂದೆ-ತಾಯಿಗಳು ಆಕೆಯ ವೃಷಲೀತ್ವವನ್ನು ಕಳೆಯುವದಾದರೆ ವೃಷಲ ಎಂಬ ಶಬ್ದಪ್ರಯೋಗವು ಸಾಧುವಾಗುತ್ತಿರಲಿಲ್ಲ. ಮತ್ತು ಶಾಸ್ತ್ರಗಳಲ್ಲೆಲ್ಲೂ ವೃಷಲೀಪಿತಾ, ಎಂಬ ಶಬ್ದವು ಇಲ್ಲ. ಆದ್ದರಿಂದ ಈ ವೃಷಲೀತ್ವದೋಷವನ್ನು ಕಳೆಯುವ ಅಧಿಕಾರವು ಪತಿಗೇ ಸೀಮಿತವಾಗಿರುತ್ತದೆ.

**ಋತುಶಾಂತಿ ಮಾಡಲು ತಂದೆಯು ಯಾವ ರೀತಿಯಲ್ಲೂ ಅಧಿಕಾರಿಯಾಗುವದಿಲ್ಲ. ಋತುಸಮಯದೋಷದಿಂದ ತಂದೆ ತಾಯಿ ಮೊದಲಾದವರಿಗೆ ದೋಷ ಹತ್ತುವದೆಂದು ಎಲ್ಲಿಯೂ ಹೇಳಿಲ್ಲ. ಅವಿವಾಹಿತ**

ಕನ್ಯೆಯು ರಜಸ್ವಲಾದೋಷವು ತಂದೆಯು ಕುಲಕ್ಕೂ ರಜೋದರ್ಶನದ ಸಮಯದ ತಿಥ್ಯಾದಿದೋಷಗಳು ಪತಿಕುಲಕ್ಕೂ ಸಂಬಂಧಿಸಿದವುಗಳಾಗಿವೆ. ಈ ಅಧಿಕಾರದ ವಿಷಯವನ್ನು ಶಾಸ್ತ್ರೀಯವಾಗಿ ವಿವರಿಸಿ ಬರೆದರೆ ಅದೊಂದು ದೊಡ್ಡ ಗ್ರಂಥವೇ ಆದೀತು. ಅದು ಪ್ರಕೃತವಲ್ಲ.

(ತಾ॥ 10-9-84 ರ 'ಅಸಂಸ್ಕೃತ ಕನ್ಯಾ ರಜೋದೋಷಶಾಂತಿ-ವಿಮರ್ಶೆ' ಎಂಬ ಲೇಖನದಿಂದ ಆಯ್ದ ಭಾಗಗಳು

○ ○ ○ ○ ○

**ಋತುಶಾಂತಿಕರ್ತೃತ್ವಾಧಿಕಾರಮೀಮಾಂಸಾ'**

ಯಾವುದೇ ಕರ್ಮಕ್ಕೆ ಆ ಕರ್ಮದ ಫಲವು ತನಗೆಬೇಕೆಂದು ಬಯಸುವವನೇ ಅಧಿಕಾರಿಯಾಗುವನೆಂದು ಅಧಿಕಾರ ಲಕ್ಷಣಮೀಮಾಂಸೆಯಲ್ಲಿ ನಿರ್ಧರಿಸಿದೆ. 'ಸ್ವರ್ಗ ಕಾಮೋ ಯಜೇತ' 'ಅಗ್ನಿಹೋತ್ರಂ ಜುಹುಯಾತ್ ಸ್ವರ್ಗಕಾಮಃ' ದರ್ಶಪೂರ್ಣ ಮಾಸಾಭ್ಯಾಂ ಸ್ವರ್ಗಕಾಮೋ ಯಜೇತ' ಎಂಬಿವೇ ಮೊದಲಾದ ಅನೇಕಶ್ರುತಿ ಗಳನ್ನು ಉದಾಹರಿಸಿ ಆ ಕರ್ಮಮೀಮಾಂಸೆಯಲ್ಲಿ ವಿಮರ್ಶೆಯಿಂದ ಮೇಲೆ ಬರೆ ದಂತೆಯೇ ಸಿದ್ಧಾಂತ ಮಾಡಿದ್ದಾರೆ. ಪ್ರಾಯಶ್ಚಿತ್ತ ವಿಧಿಗಳಲ್ಲಿ ಬ್ರಹ್ಮಹತ್ಯಾ, ಗೋಹತ್ಯಾ, ಮೊದಲಾದ ದೋಷಗಳ ಪರಿಹಾರವು ತನಗಾಗಬೇಕೆಂಬುವವನೇ ಆ ಪ್ರಾಯಶ್ಚಿತ್ತಗಳಲ್ಲಿ ಅಧಿಕಾರಿಯು.

ಲೌಕಿಕವಾದ ಫಲಗಳನ್ನು ಬಯಸುವವನೇ ಆ ಲೌಕಿಕ ಕರ್ಮಗಳಲ್ಲಿ ಅಧಿಕಾರಿ ಎಂಬುದು ಎಲ್ಲರಿಗೂ ತಿಳಿದ ವಿಷಯ. ಆರೋಗ್ಯಕಾಮನಾದವನು ಔಷಧ ಸೇವಿಸಲು ಅಧಿಕಾರಿ. ಋತ್ವಿಕ್ ಪಕ್ಷದಿಂದಲೂ ಪ್ರಾತಿನಿಧ್ಯದಿಂದಲೂ ಆ ಔಷಧ ಸೇವನೆ ಸಂಭವಿಸುವದಿಲ್ಲ. ಹಸಿವೆಯನ್ನು ನೀಗಲು ಭೋಜನವೂ ನೀರ ಡಿಕೆಯನ್ನು ಕಳೆಯಲು ಜಲಪಾನವನ್ನು ಪ್ರಾತಿನಿಧ್ಯ ದಿಂದ ಮಾಡುವದಿಲ್ಲ. ಇದು ಲೌಕಿಕ ಉದಾಹರಣೆ. ಇಷ್ಟರಿಂದಲೇ ಪ್ರಕೃತ ಋತುಶಾಂತಿಗೆ ಅಧಿಕಾರಿ ಯನ್ನು ಓದುಗರು ನಿಶ್ಚಯಿಸಬಹುದು. ಕನ್ಯೆಯ ಪ್ರಥಮ ಹಾಗೂ ದ್ವಿತೀಯ ರಜೋದರ್ಶನಕಾಲದ ದೋಷಗಳು ಕನ್ಯೆಗೂ ಅವಳ ಪತಿಗೂ ಪತಿಕುಲಕ್ಕೂ ಸಂಬಂಧಪಡುವದರಿಂದ ಆ ದೋಷಗಳನ್ನು ಪರಿಹರಿಸಿಕೊಳ್ಳುವ ಅಧಿಕಾರವು ಅವಳ ಪತಿಗೆ ಮಾತ್ರ ಇರುತ್ತದೆ. ಕನ್ಯೆಯ ಋತುಕಾಲದ ದೋಷಗಳು ತಂದೆಗೆ ಸಂಬಂಧ ಪಡದೇ ಇದ್ದುದರಿಂದ ಋತುಶಾಂತಿಯಲ್ಲಿ ತಂದೆಗೆ ಅಧಿಕಾರವಿ ಲ್ಲೆಂದು ಧಾರಾಳವಾಗಿ ಹೇಳಬಹುದು. ಈ ಭಾವದಿಂದಲೇ ಎಲ್ಲ ಪ್ರಯೋಗ ಕಾರರೂ ಪತಿಯ ಅಧಿಕಾರದಿಂದಲೇ ಶಾಂತಿಪ್ರಯೋಗಗಳನ್ನು ಬರೆದಿದ್ದಾರೆ.

ಎಲ್ಲಿಯೂ ಧರ್ಮಶಾಸ್ತ್ರಗಳಲ್ಲಿ ಅಧಿಕಾರಿಗಳನ್ನು ಮಾತ್ರ ಹೇಳುತ್ತಾರೆಯೇ ಹೊರತು ಅನಧಿಕಾರಿಗಳನ್ನು ಎತ್ತಿಹೇಳುವದಿಲ್ಲ. ಋತುಶಾಂತಿಯಲ್ಲಿ ಪತಿಯು ಅಧಿಕಾರಿಯೆಂದು ಎಲ್ಲ ಪ್ರಯೋಗಕಾರರೂ ಅದರ ಸಂಕಲ್ಪದಲ್ಲಿಯೇ ಎತ್ತಿ ಬರೆದಿದ್ದಾರೆ.

—ವಿದ್ವಾನ್ ರಾಮಚಂದ್ರ ಶಾಸ್ತ್ರೀ ಸೂರೀ.
ಆಸ್ಥಾನ ವಿದ್ವಾನ್ ಶ್ರೀಮದ್ರಾಮಚಂದ್ರಾಪುರ ಮಠ

(ತಾ॥ 5-4-85ರ 'ಋತುಶಾಂತಿಕರ್ತೃತ್ವಾಧಿಕಾರಮೀಮಾಂಸಾ' ಎಂಬ ಶ್ರೀಯುತರ ಲೇಖನದಿಂದ ಆಯ್ದ ಭಾಗಗಳು)

*ಅಕ್ಷರಸಂಯೋಜಕರ ಪ್ರಮಾದದಿಂದಲೋ ಏನೋ ? ಈ ವಾಕ್ಯಗಳಲ್ಲಿ ಏನೋ ನ್ಯೂನತೆ ಯುಂಟಾಗಿದೆ. ಲೇಖನದ ಎರಡನೇ ಮುದ್ರಣದಲ್ಲಾದರೂ ಸರಿಪಡಿಸಬಹುದಿತ್ತು.

'ಸ್ತ್ರೀಯರಿಗೆ ರಜಸ್ಸು ಬರುವದು ದೋಷವಲ್ಲ. ಅದು ಸ್ವಾಭಾವಿಕ' ಎಂದು ಹೇಳಿ ಮುಂದೆ. ಪ್ರತಿ ತಿಂಗಳೂ ಮುಟ್ಟಾದಾಗ ಆದೋಷವು ಇನ್ನಷ್ಟು ದೃಢವಾಗುತ್ತದೆ ; ಎನ್ನುತ್ತಾರೆ ಇದು ವದತೋ ವ್ಯಾಘಾತವೆಂದು ನನಗೆ ತೋರುತ್ತದೆ. —ಸಂ

o o o o o

'ಧರ್ಮಶಾಸ್ತ್ರಾಲಂಕಾರ' 'ದೈವಜ್ಞಶಿರೋಮಣಿ'
ಶ್ರೀಯುತ ಗಣಪತಿ ಕುಪ್ಪಯ್ಯ ಹೆಗಡೆ
ಕಾರ್ಯದರ್ಶಿ : ಧಾರ್ಮಿಕ ಪಂಚಾಂಗ ಸಮಿತಿ ಕೆಕ್ಕಾರು
ಪೋ. ಹೆಗಡೆ ಕುಮಟಾ. ಉ. ಕ.

ಚತುರ್ವಿಧಪುರುಷಾರ್ಥಸಾಧಕವಾದ ನಮ್ಮ ಆಚಾರ-ವಿಚಾರಗಳಿಗೆ ಶ್ರುತಿ ಸ್ಮೃತಿಪುರಾಣೇತಿಹಾಸಾದಿಗಳು ಹೇಮಾದ್ರಿ, ನಿರ್ಣಯಸಿಂಧು. ಧರ್ಮಸಿಂಧು, ಮೊದಲಾದ ಗ್ರಂಥಗಳು, ಹಾಗೂ ಸದಾಚಾರಗಳು ಪ್ರಮಾಣಗಳೆಂದು ಆಸ್ತಿಕರಾದ ನಮ್ಮ ಪೂರ್ವಜರು ಪರಿಗ್ರಹಿಸಿರುತ್ತಾರೆ.

ನಮ್ಮ ಗಂಡುಹೆಣ್ಣುಮಕ್ಕಳಿಗೆ ಗರ್ಭಾಧಾನಾದಿ ಎಲ್ಲ ಸಂಸ್ಕಾರಗಳನ್ನು ಶಾಸ್ತ್ರೋಕ್ತವಾದ ಆ ಆ ಕಾಲದಲ್ಲೇ ಪ್ರತ್ಯೇಕ ಪ್ರತ್ಯೇಕವಾಗಿ ನಡೆಸುವದು ಉತ್ತಮ ಪಕ್ಷ. ಇನ್ನು ಗಂಡು ಮಕ್ಕಳಿಗೆ ಚೌಲ ಅಥವಾ ಉಪನಯನಕಾಲದಲ್ಲಿ ಅತೀತ ಸಂಸ್ಕಾರಗಳನ್ನು ಸಮಾನತಂತ್ರದಿಂದ ನಡೆಸಿ ಮುಂದಿನ ಸಂಸ್ಕಾರವನ್ನು ನಡೆಸುವದು

ಶಾಸ್ತ್ರಕ್ಕೂ ಶಿಷ್ಟಾಚಾರಕ್ಕೂ ಅನುಕೂಲವಾದ ಎರಡನೆ ಪಕ್ಷವು ಇದ್ದೇ ಇದೆ. ಇದೇ ರೀತಿಯ ಆಚಾರವು ಈಗ ಪ್ರಾಯಶಃ ಎಲ್ಲ ಕಡೆಗಳಲ್ಲೂ ನಡೆಯುತ್ತಿದೆ. ವಿವಾಹ ಪೂರ್ವ ಸಮಾವರ್ತನೆ ಮಾಡಿಕೊಳ್ಳುವಾಗ ಬ್ರಹ್ಮಚಾರಿವ್ರತಲೋಪ ಪ್ರಾಯಶ್ಚಿತ್ತ ಪೂರ್ವಕ ನಾಲ್ಕು ವೇದವ್ರತಗಳನ್ನು ಒಂದೇ ದಿನ ನಡೆಸಿ ಸಮಾವರ್ತನೆ ನಡೆಸುವದು ಶಾಸ್ತ್ರದಿಂದಲೂ ಸದಾಚಾರದಿಂದಲೂ ಪರಿಗೃಹೀತವಾಗಿದೆ.

ಇವರಂತೆ ಹೆಣ್ಣು ಮಕ್ಕಳಿಗೂ ಗರ್ಭಾಧಾನಾದಿ ಅತೀತಸಂಸ್ಕಾರಗಳನ್ನು ವಿವಾಹ ಪೂರ್ವದಿನದಲ್ಲಿ ಸಮಾನತಂತ್ರದಿಂದ ಮಾಡುವ ಪರಂಪರೆಯು ಬಂದಿದೆ.

ಪ್ರಥಮ ರಜೋದರ್ಶನದಲ್ಲಿ ಮಾಡತಕ್ಕ ಭುವನೇಶ್ವರೀಶಾಂತಿ ಋತು ಶಾಂತಿಗಳು ಪ್ರಥಮರಜೋದರ್ಶನಕಾಲದಲ್ಲಾದ ಮಾಸತಿಥಿವಾರನಕ್ಷತ್ರಾದಿ ಗಳಿಂದುಂಟಾದ ದೋಷಗಳನ್ನು ನಿವಾರಿಸುವದೇ ಹೊರತು ಹುಡುಗಿಯ ವೃಷಲೀತ್ವ ವನ್ನು ನಿವಾರಿಸಲಾರವು. ವೃಷಲೀತ್ವನಿವಾರಣೆಯಾಗದೇ ಅವಳು ಹವ್ಯಕವ್ಯಾದಿ ಗಳಲ್ಲಿ ಶುದ್ಧಳಾಗುವದು ಹೇಗೆ ? ಕಾರಣ ವಿವಾಹವಾಗದೇ ಕನ್ಯೆಯ ವೃಷಲೀತ್ವ ನಿವಾರಣೆಯಾಗದು ವೃಷಲೀತ್ವ ನಿವಾರಣೆಯಾಗದ ಕನ್ಯೆಯು ಹವ್ಯಕವ್ಯಗಳಲ್ಲಿ ಭಾಗಿ ಯಾಗಲಾರಳು.

ಗಣಪತಿ ಕುಪ್ಪಯ್ಯ ಹೆಗಡೆ,

('ಅಸಂಸ್ಕೃತ-ಕನ್ಯಾ-ರಜೋದೋಷ ಶಾಂತಿ ಎಂಬ ಪುಸ್ತಿಕೆಯ ಬಗ್ಗೆ ಅಭಿಪ್ರಾಯ' ಎಂಬ ಪುಸ್ತಿಕೆಯಿಂದ ಉದ್ಧೃತ. ಮಾನ್ಯಶ್ರೀ ಗಣಪತಿ ಹೆಗಡೆ ಅವರು ತಮ್ಮ ಈ ಲೇಖನದಲ್ಲಿ ತಂದೆಗೆ ಋತುಶಾಂತಿಯಲ್ಲಿ ಕರ್ತೃತ್ವಾಧಿಕಾರವಿದೆಯೋ ? ಇಲ್ಲವೇ ? ಎಂಬುದರ ಬಗ್ಗೆ ಏನೂ ಹೇಳಿಲ್ಲ. ವೃಷಲೀತ್ವ-ನಿವಾರಣೆಯ ಅಧಿಕಾರವು ಪತಿಗೆ ಸೇರಿದ್ದರಿಂದ ವಿವಾಹ ಪೂರ್ವದಲ್ಲಿ ಋತುಶಾಂತಿಯನ್ನು ಮಾಡಿದರೂ ಒಂದೇ, ಮಾಡದಿದ್ದರೂ ಒಂದೇ, ಎಂಬುದಿಲ್ಲಿ ಮಾನ್ಯ ಲೇಖಕರ 'ಅಂಬೋಣ' ವಿರಬೇಕು. —ಸಂ)

ವಿದ್ವಾನ್ ಶೇಷಾಚಲ ಶರ್ಮಾ, ಎಂ. ಎ.
ಉಪಪ್ರಾಧ್ಯಾಪಕರು
ಶ್ರೀ ಚಾಮರಾಜೇಂದ್ರ ಸಂಸ್ಕೃತ ಕಾಲೇಜ್,
ಬೆಂಗಳೂರು-18

ಶ್ರೀರಾಮಚಂದ್ರಪುರಮಠದ ಆಸ್ಥಾನ ವಿದ್ವಾಂಸರಾದ ವಿದ್ವಾನ್ ಶ್ರೀ ರಾಮಚಂದ್ರ ಶಾಸ್ತ್ರೀ ಸೂರೀ ಅವರು ಬರೆದು ಪ್ರಸ್ತುತ ಪಡಿಸಿದ 'ಅಸಂಸ್ಕೃತ

ಕನ್ಯಾರಜೋದೋಷಶಾಂತಿವಿಮರ್ಶೆ' ಎಂಬ ಲೇಖನವನ್ನು ಓದಿದೆನು. ಶ್ರೀಯುತರು ಪ್ರಮಾಣಭೂತವಾದ ಧರ್ಮಶಾಸ್ತ್ರಗ್ರಂಥಗಳನ್ನು ಅವಲೋಕನ ಮಾಡಿ ಪರಂಪರಾಗತವಾಗಿ ರೂಢಿಯಲ್ಲಿರುವ ಶಾಸ್ತ್ರಸಮ್ಮತವಾದ ಆಚರಣೆಗಳನ್ನು ಚೆನ್ನಾಗಿ ಗಮನಿಸಿ ಪ್ರಸ್ತುತ ವಿಮರ್ಶ ಲೇಖನವನ್ನು ಬರೆದಿದ್ದಾರೆ. ಪ್ರಸಿದ್ಧ ಧರ್ಮ ಶಾಸ್ತ್ರ ವಾಕ್ಯಗಳನ್ನು ಕಾಲಕ್ಕೆ ತಕ್ಕಂತೆ ಅನುಕೂಲಸಿಂಧುವನ್ನಾಗಿ ಮಾರ್ಪಡಿಸಿಕೊಳ್ಳ ಬಾರದು ಎಂಬ ವಿಷಯ ಶ್ರೀಮಾನ್ ಸೂರಿಯವರ ವಿಮರ್ಶ ಲೇಖನ ಓದುವವರಿಗೆ ಮನದಟ್ಟಾಗುತ್ತದೆ. ಶಾಸ್ತ್ರ ಮತ್ತು ಸಂಪ್ರದಾಯಗಳಿಗೆ ಅನುಸಾರವಾದ ಆಚರಣೆ ಗಳಲ್ಲಿ ನಿಷ್ಠೆಯುಳ್ಳ ಧರ್ಮ ಜಿಜ್ಞಾಸುಗಳು ಈ ಲೇಖನವನ್ನು ಅವಶ್ಯವಾಗಿ ಓದ ಬೇಕೆಂದು ನನ್ನ ಅಭಿಪ್ರಾಯ.

ವಿದ್ವಾನ್ ಶೇಷಾಚಲ ಶರ್ಮಾ ಎಂ. ಎ.

20-9-84

ಅಸಂಸ್ಕೃತ ಕನ್ಯಾರಜೋದೋಷಶಾಂತಿ ಎಂಬ ಪುಸ್ತಿಕೆಯ ಬಗೆಗೆ ಅಭಿಪ್ರಾಯ' ಎಂಬ ಪುಸ್ತಿಕೆಯಿಂದ ಉದ್ಧೃತ).

○ ○ ○ ○

ವಿದ್ವಾನ್ ಶ್ರೀ ಸಿ. ಎನ್. ನರಹರಿ ಭಟ್ಟರು
ಶ್ರೀ ಹರಿನಿಲಯ
ಚನ್ನಿಗನ ತೋಟ, ಸಾಗರ 577 417.

## ಗುರುಗಳಿಗೆ ವಂದನೆ

ಶ್ರೀಮಾನ್ ಹೆಚ್. ಡಿ. ರಾಮಕೃಷ್ಣ ಭಟ್ಟರ ಲೇಖನ 'ಶಾಸ್ತ್ರಿಗಳ ಶಾಂತಿ ವಿಮರ್ಶೆಗೆ ಉತ್ತರ' ನೋಡಿದ್ದಾಯಿತು.

ಶ್ರೀ ರಾಮಕೃಷ್ಣಭಟ್ಟರು ಇದುವರೆಗೆ ತಮ್ಮ ಖಾಯಂ ಶಿಷ್ಯವೃಂದದಲ್ಲಿ ಹಾಗೂ ಬೇರೆಕಡೆಗಳಲ್ಲೂ ಸಹ ಋತು ಶಾಂತಿಯನ್ನು ಯಾವ ಕರ್ತೃವಿನಿಂದ ಮಾಡಿ ಸಿದ್ದಾರೆ ? ಪ್ರಾಮಾಣಿಕವಾಗಿ ಆತ್ಮಸಾಕ್ಷಿಯಾಗಿ ಹೇಳಬೇಕು. ಈಗ 'ಬ್ರಹ್ಮ ಸಾಕ್ಷಾತ್ಕಾರವಾದಂತೆ' ಅಸಂಸ್ಕೃ ಕನ್ಯಾರಜಸ್ವಲಾ-ಶಾಂತಿ ವಿಧಿ' ಎಂಬ ಲೇಖನ ಪತ್ರ ಹೊರಡಿಸಲು ಕಾರಣವೇನು ? ಇದುವರೆಗೆ ಎಲ್ಲಾ ಲೌಕಿಕ, ವೈದಿಕರೂ ವಿವಾಹಿತವರನಿಂದಲೇ ಆಚರಣೆಯಾದದ್ದು ಸರ್ವಸಾಮಾನ್ಯ ಎಲ್ಲರಿಗೂ ತಿಳಿದ ವಿಷ ಯವೇ ಆಗಿದೆ,

ಕೇವಲ ಋತುಶಾಂತಿ ಕರ್ತನ ವಿಷಯದಲ್ಲಿ ಮಾತ್ರ ತಿದ್ದುಪಡಿಗೆ ಹೊರಟ ಭಟ್ಟರ ಕಣ್ಣಿಗೆ ಇನ್ನಾವ ಸುಧಾರಣೆಯೂ ಗೋಚರಿಸಲಿಲ್ಲವೇ ?

ಬ್ರಾಹ್ಮಣ್ಯನಾಶವಾಗುತ್ತಿರುವ, ಸಂಸ್ಕಾರ ಕರ್ಮಗಳು ಲೋಪವಾಗುತ್ತಿರುವ ಇಂದಿನ ಕಾಲದಲ್ಲಿ ಟೀಕೆ-ಟಿಪ್ಪಣೆಗಳು ಆರೋಗ್ಯಕರವಲ್ಲ.

ಋತುಮತಿ ಆಗದ ಕನ್ಯಾ ವಿವಾಹದಲ್ಲಿ ಋತುಶಾಂತಿ ಕರ್ತೃಗಳು ಯಾರಾಗುತ್ತಾರೆ ? ಪತಿಯೋ ? ತಂದೆಯೋ ? ಋತುಶಾಂತಿಯು ಮಾಸತಿಥ್ಯಾದಿದೋಷ ಶಾಂತಿಯೋ ? ಅಥವಾ ಸಂಸ್ಕಾರಕರ್ಮವೇ ?

ವಿದ್ವಾನ್ ಸಿ. ಎನ್. ನರಹರಿ ಭಟ್ಟ

24-4-85

(ಶ್ರೀಯುತರ 'ಗುರುಗಳಿಗೆ ವಂದನೆ' ಶೀರ್ಷಿಕೆಯ ಲೇಖನದಿಂದ ಸಂಗ್ರಹಿಸಿದ ಅಂಶಗಳು.

ಶಿಷ್ಯರೊಬ್ಬರು ಭಕ್ತಿಶ್ರದ್ಧೆಯಿಂದ ಗುರುಗಳಿಗೆ ಸಮರ್ಪಿಸಿದಂತಿರುವ ಈ ಲೇಖವನ್ನು ವಿದ್ವಾನ್ ಶ್ರೀ ನರಹರಿ ಭಟ್ಟರು ಶ್ರೀಮಾನ್ ಎಚ್. ಡಿ. ರಾಮಕೃಷ್ಣ ಭಟ್ಟರಿಗೆ ಅರ್ಪಿಸಿದ್ದಾರೆ. ಪ್ರಸಕ್ತಾನುಪ್ರಸಕ್ತಿಯ ಪರಂಪರಾಸಂಬಂಧದಿಂದ ಈ ಲೇಖನವು ಪ್ರಕೃತ ಜಿಜ್ಞಾಸೆಗೆ ಸಂಬಂಧ ಪಡಬಹುದಾದರೂ ವಿಸ್ತೃತವಾದ ಇದನ್ನು ಸಮಗ್ರವಾಗಿ ಇಲ್ಲಿ ಅವಳವಡಿಸಲಾಗದಿದ್ದುದಕ್ಕೆ ವಿಷಾದಿಸುತ್ತೇನೆ.—ಸಂ.)



## ಜಿಜ್ಞಾಸೆಗೆ ಹಿನ್ನೆಲೆ

...ಪ್ರಥಮ ರಜೋದರ್ಶನ ನಿಮಿತ್ತವಾದ ಶಾಂತಿಯನ್ನು ಎಂದಾದರೂ ಮಾಡುವವರಲ್ಲಿ ಅರ್ಥವಿಲ್ಲ. ಶಿಷ್ಟಸಂಪ್ರದಾಯವನ್ನು ವಿಚಾರಿಸಿದರೆ ಈ ಶಾಂತಿಯನ್ನು ಮಾಡದೇ, ಋತುಮತಿಯರಾದ ಹುಡುಗಿಯರು ಶುದ್ಧರಾಗುವದಿಲ್ಲೆಂದು ಅಭಿಪ್ರಾಯ ಹೊರಡುತ್ತದೆ. ಅದು ಕಾರಣ ಕನ್ಯಾದಾನವನ್ನು ಮಾಡುವ ಮೊದಲೇ ಋತುಶಾಂತಿಯನ್ನು ಮಾಡುವದಾಗಿದೆ. ನಮ್ಮ ಅಭಿಪ್ರಾಯದಂತೆ ಪ್ರಥಮ ರಜೋ ದರ್ಶನವಾದಾಗಲೇ ಶುದ್ಧಿ ಸ್ನಾನಾನಂತರ ತನ್ನಿಮಿತ್ತ ಶಾಂತಿಯನ್ನು ಮಾಡಲೇಬೇಕು. ವಿವಾಹವಾದನಂತರ ಮಾಡುವ ಗರ್ಭಾಧಾನ ಹೋಮಕ್ಕೂ, ಪ್ರಥಮ ರಜೋದರ್ಶನದಲ್ಲಿನ ದೋಷ ಪರಿಹಾರಕ್ಕಾಗಿ ಮಾಡುವ ಈ ಋತುಶಾಂತಿಗೂ ಪರಸ್ಪರ ಯಾವ ಸಂಬಂಧವೂ ಇಲ್ಲ.

—ವೈಜಯಂತೀ ಪಂಚಾಂಗದ ಸಂಪಾದಕರು

ಖರಸಂ । (1951, 52)

(ಶ್ರೀ ರಾಮಕೃಷ್ಣಭಟ್ಟರು ಉಲ್ಲೇಖಿಸಿದ್ದು)

○ ○ ○ ○

'ಪಂಡಿತಪ್ರವರ' ವಿದ್ವಾನ್
ಶ್ರೀ ಬಿ. ರಾಮಭಟ್ಟರು.
ಪೂರ್ವಮೀಮಾಂಸಾ ಶಾಸ್ತ್ರ ವಿಭಾಗದ ಮುಖ್ಯಸ್ಥರು
ಶ್ರೀಮತ್ ಭಾರತೀಯ ಗೀರ್ವಾಣ ಪ್ರೌಢ ವಿದ್ಯಾಭಿವರ್ಧಿನೀ
ಮಹಾಪಾಠಶಾಲಾ,
ಶಂಕರಮಠ, ಬೆಂಗಳೂರು-4

## ಋತುಶಾಂತಿಯಲ್ಲಿ ತಂದೆಗೂ ಕರ್ತೃತ್ವಾಧಿಕಾರವಿದೆ

ಪ್ರಥಮರಜೋದರ್ಶನದ ಸಮಯದಲ್ಲಿ ಮಾಸ-ತಿಥಿ-ವಾರಾದಿಗಳು ದುಷ್ಟವಾಗಿದ್ದರೆ ಆ ದೋಷನಿವೃತ್ತಿಗಾಗಿ ಮಾಡಬೇಕಾದ 'ಋತುಶಾಂತಿ'ಯಲ್ಲಿ ತಂದೆಗೆ

ಕರ್ತೃತ್ವಾಧಿಕಾರವಿದೆಯೋ ? ಇಲ್ಲವೇ ? ಎಂಬುದೊಂದು ಜಿಜ್ಞಾಸೆ ಉತ್ಥಿತವಾದುದ ತಿಳಿಯಿತು. ಋತುಶಾಂತಿಯ ಸಂಕಲ್ಪದಲ್ಲಿ 'ಮಮಭಾರ್ಯಾಯಾಃ' ಎಂದು ಪ್ರಯೋಗಕಾರರು ಬರೆದಿರುವದರಿಂದ ಇಲ್ಲಿ ಹುಡುಗಿಯ ತಂದೆಗೆ ಕರ್ತೃತ್ವಾಧಿಕಾರ ವಿಲ್ಲೆಂದು ಕೆಲವರವಾದ. ಇಲ್ಲಿ ನಾವು ವಿಮರ್ಶಿಸಬೇಕಾದ ಅಂಶವೇನೆಂದರೆ : ಹುಡುಗಿಯ ಜಾತಕರ್ಮಾದಿಸಂಸ್ಕಾರಗಳಲ್ಲಿ ತಂದೆಗೆ ಅಧಿಕಾರವನ್ನು ಪ್ರಯೋಗಕಾರರು ಹೇಳಿದ್ದಾರೆ. ವಿವಾಹ ಮಾಡಿಕೊಡಬೇಕಾದ ಅಧಿಕಾರವೂ ತಂದೆಗೇ ಸೇರಿದ್ದು. ಹುಡುಗಿಯು ಇನ್ನೂ ಅವಿವಾಹಿತಳಾಗಿದ್ದು ಋತುಮತಿಯಾದಾಗ ತಿಥ್ಯಾದಿ ದೋಷಗಳ ಪರಿಹಾರಕ್ಕಾಗಿ ಶಾಂತಿಯನ್ನು ಆಗ ಯಾರು ಮಾಡಬೇಕು ? ವಿವಾಹದ ಪೂರ್ವದಲ್ಲಿ ಋತು ಶಾಂತಿಯನ್ನು ಮಾಡಕೂಡದೆಂದು ಶಾಸ್ತ್ರಗಳು ತಿಳಿಸಿವೆಯೋ ? ಋತುಮತಿಯಾದ ಹುಡುಗಿಯನ್ನು ಮದುವೆ ಮಾಡಿಕೊಡುವಾಗ, ಶುದ್ಧಿಗಾಗಿ ತಂದೆಯು ಕೃಚ್ಛ್ರಾಚರಣಾದಿ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವ ದಿಲ್ಲವೇ ? ಹುಡುಗಿಯ ನಿಮಿತ್ತವಾಗಿಯೂ ಇಲ್ಲಿ ಪ್ರಾಯಶ್ಚಿತ್ತವನ್ನು ತಂದೆಯೇ ಮಾಡುವದಿಲ್ಲವೇ ? ಪ್ರಥಮರಜೋದರ್ಶನದ ಸಮಯದ ತಿಥ್ಯಾದಿಗಳೇನಾದರೂ ದುಷ್ಟವಾಗಿದ್ದವೇ ? ದೋಷ ಪರಿಹಾರಕ್ಕಾಗಿ ಶಾಂತಿ ಮಾಡಿದೆಯೋ ? ಎಂದು ವರ ಪಕ್ಷದವರು ಅಥವಾ ಇನ್ನಾರಾದರೂ ಪ್ರಶ್ನಿಸಿದಲ್ಲಿ ಆಗ ಅಲ್ಲಿ ಕರ್ತೃತ್ವಾಧಿಕಾರ ಯಾರದ್ದೆಂದಾಯಿತು ? ಋತುಮತಿಯಾದ ಸ್ತ್ರೀಗೆ ಕುಜರಾಹ್ವಾದಿ ದಶಾಸಂಧಿಗಳೇನಾದರೂ ಸಂಭವಿಸಿದರೆ ಆ ದೋಷನಿವೃತ್ತಿಗಾಗಿ ಉಕ್ತವಾದ ಶಾಂತ್ಯಾದಿಕರ್ಮಗಳನ್ನು ತಂದೆಯೇ ನೆರವೇರಿಸುವದಿಲ್ಲವೇ ? ಈ ಎಲ್ಲ ದೃಷ್ಟಿಯಿಂದ ನೋಡಿದಾಗ ವಿವಾಹಕ್ಕೆ ಮೊದಲೇ ಕನ್ಯೆಯು ಋತುಮತಿಯಾದಾಗ ತಿಥ್ಯಾದಿದೋಷಗಳೇನಾದರೂ ಸಂಭವಿಸಿದಲ್ಲಿ ಆ ದೋಷನಿವೃತ್ತಿಗಾಗಿ ಉಕ್ತವಾದ ಶಾಂತಿಕರ್ಮವನ್ನು ತಂದೆಯು ನೆರವೇರಿಸಬಹುದೆಂದು ತೋರುತ್ತದೆ. ವಿವಾಹದ ಅನಂತರವೇ ಹುಡುಗಿಯು ಋತುಮತಿಯಾದಾಗ್ಗೆ ಈ ಶಾಂತಿಯಲ್ಲಿ ಪತಿಯೇ ಕರ್ತೃವಾಗುವರಿಂದ ಪ್ರಯೋಗ ಕಾರರು ಈ ಶಾಂತಿಯ ಸಂಕಲ್ಪದಲ್ಲಿ 'ಮಮ ಪತ್ನ್ಯಾಃ' ಎಂದು ಬರೆದುದು ಕ್ರಮ ಪ್ರಾಪ್ತವೇ ಹೊರತು ವಿವಾಹಕ್ಕೆ ಮೊದಲು ಹುಡುಗಿಯ ಒಳಿತಿಗಾಗಿ ತಂದೆಯು ಮಾಡುವ ಶಾಂತಿಯನ್ನು ನಿಷೇಧಿಸುವಲ್ಲಿ ಪ್ರಯೋಗಕಾರರ ಈ ಮಾತು ಪ್ರಬಲವಾದ ಪ್ರಮಾಣವೆನಿಸಲಾರದು. ಕಾರಣ ವಿವಾಹಕ್ಕೆ ಮೊದಲೇ ಕನ್ಯೆಯು ಋತುಮತಿಯಾದಾಗ ತಿಥ್ಯಾದಿದೋಷಗಳೇನಾದರೂ ಸಂಭವಿಸಿದಲ್ಲಿ ಆ ದೋಷಗಳ ಪರಿಹಾರಕ್ಕಾಗಿ ತಂದೆಯೇ ಉತ್ತ್ಕೃಷ್ಟಕಾಲದಲ್ಲಿ ಈ ಶಾಂತಿಯನ್ನು ನೆರವೇರಿಸುವದರಲ್ಲಿ ಬಾಧಕವೇನೂ ಇಲ್ಲವೆಂದು ನಮಗೆ ತೋರುತ್ತದೆ.

—ವಿದ್ವಾನ್ ಬಿ. ರಾಮಭಟ್ಟ

'ಪಂಡಿತ ಪ್ರವರ' 'ವಿದ್ವಾನ್'
ಶ್ರೀ ಕೆ. ಕೃಷ್ಣ ಜೋಯಿಸರು
ಅದ್ವೈತವೇದಾಂತ ವಿಭಾಗದ ಮುಖ್ಯಸ್ಥರು
ಶ್ರೀಮಂತ್ ಭಾರತೀಯ ಗೀರ್ವಾಣ ಪ್ರೌಢ ವಿದ್ಯಾಭಿವರ್ಧಿನೀ
ಮಹಾಪಾಠಶಾಲಾ
ಶಂಕರಮಠ, ಬೆಂಗಳೂರು-4

ಋತುಶಾಂತಿಯಲ್ಲಿ ತಂದೆಗೂ ಕರ್ತೃತ್ವಾಧಿಕಾರ ವಿದೆಯೇ ? ಎಂಬೀ ಬಗೆಯ ಬೋಧಾಯನವಿದ್ವಾಂಸರ ಜಿಜ್ಞಾಸೆಯೇನೋ ಇಂದು ಉಚಿತವಾಗಿದೆ. ಇಲ್ಲಿ ಶಾಸ್ತ್ರವು ತಂದೆಗೆ ಕರ್ತೃತ್ವಾಧಿಕಾರವನ್ನು ನಿಷೇಧಿಸಿದ್ದು ಕಂಡು ಬರದಿದ್ದರೂ ಪ್ರಯೋಗಕಾರರ ಅಭಿಪ್ರಾಯದ ಮೇರೆಗೆ ಈ ಶಾಂತಿಯನ್ನು ವಿವಾಹದ ಅನಂತರ. ಪತಿಯೇ ನೆರವೇರಿಸುವದು ಸೂಕ್ತವೆಂದು ಹೇಳಬೇಕಾಗುತ್ತದೆ. ಒಂದು ವೇಳೆ ಹುಡುಗಿಗೆ ವಿವಾಹದ ನಿರೀಕ್ಷೆಯೇ ತಪ್ಪಿ ಹೋಗುವಂತಿದ್ದಲ್ಲಿ ಆಗ ಬೇಕಾದರೆ ಹುಡುಗಿಯ ಒಳಿತನ್ನು ಸಂಕಲ್ಪಿಸಿ ತಂದೆಯು ಈ ಶಾಂತಿಯನ್ನು ನೆರವೇರಿಸಬಹುದೆಂದು ನಮ್ಮ ಅಭಿಪ್ರಾಯ.

—ವಿದ್ವಾನ್ ಕೆ. ಕೃಷ್ಣಜೋಯಿಸ್

16, ಶಂಕರಮಠ ಅಗ್ರಹಾರ
ಶಂಕರಪುರಂ, ಬೆಂಗಳೂರು-4
ಕ್ರೋಧನ ಸಂ. ಆಷಾಢಬಹುಳ ತ್ರಯೋದಶೀ ಸೋಮವಾರ,
15-7-85

೦ ೦ ೦ ೦ ೦

ವಿದ್ವಾನ್ ಎನ್. ರಂಗನಾಥ ಶರ್ಮಾ
831, 'ಜಾನಕೀ ಕೃಪಾ'
4ನೇ ಮುಖ್ಯ ರಸ್ತೆ, ವಿಜಯನಗರ
ಬೆಂಗಳೂರು-560040

## ಋತುಶಾಂತಿಕರ್ತೃತ್ವಾಧಿಕಾರವಿಚಾರ

ಹಿಂದೆ ಬಾಲ್ಯ ವಿವಾಹವೇ ಪ್ರಚುರವಾಗಿತ್ತು. ವಿವಾಹಾನಂತರ ಕನ್ಯೆಗೆ ಪ್ರಥಮರಜೋದರ್ಶನವಾಗುತ್ತಿತ್ತು. ಆಗ ಋತುಶಾಂತಿಗೆ ಪತಿಯೇ ಕರ್ತೃವೆಂಬುದು ನಿರ್ವಿವಾದವಾಗಿತ್ತು. ಈಗಲಾದರೋ ವಿವಾಹಕ್ಕೆ ಪೂರ್ವದಲ್ಲಿಯೇ ರಜಸ್ವಲೆಯಾಗುವದರಿಂದ ಈ 'ಋತುಶಾಂತಿ ಕರ್ತೃತ್ವಾಧಿಕಾರಜಿಜ್ಞಾಸೆ' ಎದ್ದಿದೆ, ಈ ಸಂದರ್ಭದಲ್ಲಿಯೂ ವಿವಾಹವಾದ ಮೇಲೆ ಪತಿಯೇ ಋತುಶಾಂತಿಗೆ ಕರ್ತನೆಂದೂ, ವಿವಾಹಕ್ಕೆ ಪೂರ್ವದಲ್ಲಿ ತಂದೆಗೆ ಈ ಶಾಂತಿಯನ್ನು ಮಾಡಲು ಅಧಿಕಾರವಿಲ್ಲೆಂದೂ ಕೂಡ ವೇ. ವಿದ್ವಾನ್ ರಾಮಚಂದ್ರಶಾಸ್ತ್ರೀ ಸೂರಿ ಅವರು ತಮ್ಮ ಲೇಖನ 'ಅಸಂಸ್ಕೃತಕನ್ಯಾರಜೋದೋಷಶಾಂತಿ – ವಿಮರ್ಶೆ'ಯಲ್ಲಿ ವಾದಿಸಿದ್ದಾರೆ. ಈ ವಾದಕ್ಕೆ ಆಧಾರ ಸಾಲದು. 'ವೃಷಲೀಪತಿ' ಎಂಬ ಶಬ್ದವನ್ನು ಜಗ್ಗಾಡುವದರಿಂದ ಪ್ರಯೋಜನವಿಲ್ಲ. ಏಕೆಂದರೆ, ವೃಷಲೀತ್ವವನ್ನು ಹೋಗಲಾಡಿಸತಕ್ಕದ್ದು ಋತುಶಾಂತಿಯಲ್ಲ, ಕೂಷ್ಮಾಂಡ ಹೋಮ, ಭುವನೇಶ್ವರೀ ಶಾಂತಿಗಳು ವೃಷಲೀತ್ವದೋಷ ನಿವಾರಣೆಗೆ ಉಕ್ತವಾಗಿವೆ. ಆದ್ದರಿಂದ ಋತುಶಾಂತಿ ಮಾಡಲು ತಂದೆಗೆ ಅಧಿಕಾರವೇಕಿಲ್ಲ? ಎಂಬ ಪ್ರಶ್ನೆ ನಿರುತ್ತರವಾಗಿ ಉಳಿಯುತ್ತದೆ. ಕನ್ಯಾದಾನಪರ್ಯಂತ ಮಗಳ ಹಿತಕ್ಕಾಗಿ ಮಾಡುವ ಕಾರ್ಯವೆಲ್ಲ ತಂದೆಗೆ ಸಂಬಂಧಿಸಿದ್ದೆಂಬುದು ಸ್ವತಃಸಿದ್ಧ. ಕನ್ಯೆಗೆ ಒಂದುವೇಳೆ ಶುಕ್ರಾದಿತ್ಯ, ಕುಜರಾಹು ಮುಂತಾದ ದಶಾಸಂಧಿದೋಷಗಳುಂಟಾದರೆ ಶಾಂತಿಯನ್ನು ತಂದೆ ಮಾಡುತ್ತಾನೋ? ಇಲ್ಲವೋ? ಅಕಸ್ಮಾತ್ ಕನ್ಯೆ ಮೃತಳಾದರೆ ಅಂತ್ಯಕರ್ಮವನ್ನು ತಂದೆಯಲ್ಲದೇ ಯಾರು ಮಾಡಬೇಕು? ಕರ್ಣವೇಧಾಂತವಾಗಿ ಮಾತ್ರ ತಂದೆಗೆ ಅಧಿಕಾರವಿದೆಯನ್ನುವ ವಚನಕ್ಕೆ ಸಂಸ್ಕಾರ ಕ್ರಮದಲ್ಲಿ ಬರುವ ಮುಂದಿನ ವಿವಾಹ ಸಂಸ್ಕಾರಕ್ಕೂ ವಿವಾಹಾನಂತರದ ಯಾವುದೇ ಸಂಸ್ಕಾರಕ್ಕೂ ತಂದೆ ಅಧಿಕಾರಿಯಲ್ಲ ಎಂಬುದಿಷ್ಟೇ ಅರ್ಥ. ಋತುಶಾಂತಿಯು ಸಂಸ್ಕಾರವೇ ಅಲ್ಲ. ಕನ್ಯಾದಾನದವರೆಗೆ ತಂದೆಯೇ ಸ್ವಾಮಿ. ಅಲ್ಲಿಯವರೆಗೆ ಕನ್ಯೆಗಾಗಿ ಮಾಡಬೇಕಾದ ಕರ್ತವ್ಯವನ್ನು ತಂದೆ ನಡೆಸಲು ಅಡ್ಡಿಯಿಲ್ಲವೆಂದು ನನಗೆ ತೋರುತ್ತದೆ. ಈ ವಿಷಯದಲ್ಲಿ

ಧರ್ಮಶಾಸ್ತ್ರದ ಸ್ಪಷ್ಟವಾದ ಆಧಾರ ದೊರಕುವವರೆಗೆ ವೇ॥ ಶಾಸ್ತ್ರಿಗಳ ವಾದ ನಿಲ್ಲುವದಿಲ್ಲ.

—ವಿದ್ವಾನ್ ಎನ್. ರಂಗನಾಥ ಶರ್ಮಾ
2–10–1984

'ಅಸಂಸ್ಕೃತ ಕನ್ಯಾರಜೋದೋಷ ಶಾಂತಿ' ಎಂಬ ಪುಸ್ತಿಕೆಯ ಬಗ್ಗೆ ಅಭಿಪ್ರಾಯ. ಎಂಬ ಪುಸ್ತಿಕೆಯ ಪ್ರಸ್ತಾವನೆಯಿಂದ.

o o o o

ವಿದ್ವಾನ್ ಶ್ರೀ. ವಿನಾಯಕ ಉಡುಪರು
ಶ್ರೀಮತ್ಸದ್ವಿದ್ಯಾ ಸಂಜೀವಿನೀ ಮಹಾ ಪಾಠಶಾಲಾ
ಶೃಂಗೇರಿ

ಹೆಣ್ಣುಮಕ್ಕಳಿಗೆ ಪ್ರಥಮರಜೋದರ್ಶನದಲ್ಲಿ ಸಂಭವಿಸಬಹುದಾದ 'ಕಾಲ ದೋಷ' ನಿವಾರಣೆಗಾಗಿ ವಿಹಿತವಾದ ಶಾಂತಿಯನ್ನು ವಿವಾಹದ ಪೂರ್ವದಲ್ಲೂ ಮಾಡುವದರಲ್ಲಿ ಅನೌಚಿತ್ಯವೇನೂ ಕಂಡುಬರುವದಿಲ್ಲ. ಸ್ಪಷ್ಟವಾದ ಪ್ರಮಾಣ ವಚನವೇನಾದರೂ ಉಪಲಭ್ಧವಾದರೆ ಆಗ ಬೇಕಾದರೆ ತಂದೆಗೆ ಈ ಶಾಂತಿಯಲ್ಲಿ ಕರ್ತೃತ್ವಾಧಿಕಾರವಿಲ್ಲೆಂದು ಒಪ್ಪಬಹುದು.

ಶ್ರೀಯುತರು ಮೌಖಿಕವಾಗಿ ವ್ಯಕ್ತಪಡಿಸಿದ ಅಭಿಪ್ರಾಯ

o o o o

ಪಂಡಿತ ಶ್ರೀ ಪುರೋಹಿತ ಶಂಕರನಾರಾಯಣ ಭಟ್ಟರು
ಕೆದಿಲ ದ. ಕ. 574220

ಋತುಶಾಂತಿ ಕರ್ತೃತ್ವಾಧಿಕಾರದ ವಿಚಾರವಾಗಿ ನಮ್ಮ ಕಡೆಯ ಅನುಭವ ಹೀಗಿದೆ :—

ಬಾಲ್ಯದಲ್ಲಿ ನಾನು ಕರ್ಮಕಾಂಡಪ್ರಯೋಗದ ಶ್ರೀಗಣೇಶಾಯನಮಃ ಎನ್ನು ವಾಗಲೇ ಶಾರದಾ ಬಿಲ್ಲು ಪ್ರಾಯಶಃ ಜಾರಿಗೆ ಬಂದಿದೆ. ಪ್ರೌಢ ವಿವಾಹವು ಲೋಕ ಸಮ್ಮತವಾಗುತ್ತಾ ಬಂದಿದೆ. ನಮ್ಮ ತೀರ್ಥಚರಣರು ಹಾಗು ವೇ, ಯಮುಂಜ ಶಂಕರ ಜೋಯಿಸರು ಆಗ ಈ ಕಡೆಗೆ ಧರ್ಮಶಾಸ್ತ್ರದಿಗ್ದಂತಿಗಳು, ತಂದೆಯ ಮನೆ ಯಲ್ಲಿ ಋತುಮತಿಯಾದ ಅವಿವಾಹಿತ ಕನ್ಯೆಗೆ ಜಾತಕರ್ಮನಾಮಕರಣಾದಿ ಸಂಸ್ಕಾರ

ಗಳು ಆಗಿದ್ದರೂ ಆಗಿರದಿದ್ದರೂ (ಆಗಿರದಿದ್ದರೆ ಕನ್ಯಾಸಂಸ್ಕಾರ ಪೂರ್ವಕವಾಗಿ) ಋತುಶಾಂತಿ ನಡೆಯುತ್ತಿತ್ತು. ಒಂದು ವೇಳೆ ಪ್ರಥಮರಜೋದರ್ಶನದ ಸರದಿಯಲ್ಲಿ ಇಲ್ಲದಿದ್ದರೂ ವಿವಾಹನಿರ್ಣಯವಾದ ಬಳಿಕವಾದರೂ ಋತುಶಾಂತಿಯಾಗದೇ ವಿವಾಹದ ನಾಂದಿ ಮಾಡುತ್ತಿದ್ದಿಲ್ಲ. ಈಗಲೂ ಅದು ಜಾರಿಯಲ್ಲಿದೆ. ತಂದೆಯು ಪ್ರತ್ರೀ ವಿವಾಹವನ್ನು ಋತುಶಾಂತಿ ಮಾಡದೇ ಮಾಡುವುದೇ ಇಲ್ಲ.

ವಿವಾಹಕ್ಕೆ ಮೊದಲು ಋತುಶಾಂತಿಯು ಯುಕ್ತವಲ್ಲ ಎನ್ನುವ ಪುರೋಹಿತರೂ ನಮ್ಮಲ್ಲಿ ಕೆಲವರಿದ್ದಾರೆ. ಆದರೆ ನಾವು ದಿನಾಲೂ ಸಂಚರಿಸುವ ಕ್ಷೇತ್ರಗಳಲ್ಲಿ ಋತು ಶಾಂತಿಮಾಡದೇ ವಿವಾಹ ಮಾಡುವದಿಲ್ಲ. ಕಾರಣ ಹೀಗುಂಟು. ಮಗಳಿಗೆ ಸಂಧಿ ದೋಷವಿದ್ದಾಗ ವಿವಾಹದ ಅನಂತರ ಸಂಧಿಶಾಂತಿ ಮಾಡುವದಾದಲ್ಲಿ ಸಂಧಿಕಾಲ ತಪ್ಪಿಹೋಗುತ್ತದೆ. ಅದರಂತೆ ವಿವಾಹ ಪೂರ್ವದಲ್ಲಿ ಋತುಮತಿಯಾದವಳ ಜನ್ಮನ ಕ್ಷತ್ರ-ರಾಶಿಗಳ ಗ್ರಹಣವೇನಾದರೂ ಸಂಭವಿಸಿದರೆ ಆ ಪ್ರಯುಕ್ತ ಶಾಂತಿಯನ್ನು ಕೂಡ ವಿವಾಹದ ಅನಂತರ ಮಾಡುವದಿಲ್ಲ. 'ಪ್ರಥಮರಜೋದರ್ಶನಕಾಲೇ (ಮಮ ಕುಮಾರ್ಯಾಃ) ಮಾಸತಿಥಿ ವಾರ ನಕ್ಷತ್ರ ಯೋಗ ಕರಣಲಗ್ನಾದಿ ಜನಿತ ಸಮಸ್ತ ದೋಷ ಶಾಂತ್ಯರ್ಥಂ ಋತುಶಾಂತಿಂ ಕರಿಷ್ಯೇ' ಎಂದು ಸಂಕಲ್ಪಿಸಿ ತಂದೆಯೇ ಋತು ಶಾಂತಿಯನ್ನೂ ಮಾಡಲೇಬೇಕು. ಇದು ದೋಷ ಶಾಂತಿಯೇ ಹೊರತು ವಿವಾಹಕ್ಕೂ ಇದಕ್ಕೂ ಅನ್ಯೋನ್ಯಸಂಬಂಧವಿಲ್ಲ. 'ಯಸ್ತರ್ಕೇಣಾನುಸಂಧತ್ತೇ ಸ ಧರ್ಮಂ ವೇದ ನೇತರಃ' ಎಂಬ ಮನುವಚನವನ್ನು ಇಲ್ಲಿ ಸ್ಮರಿಸಬಹುದೆನ್ನುತ್ತಾರೆ.

ಪುರೋಹಿತ ಶಂಕರನಾರಾಯಣ ಭಟ್ಟ
11-3-85

ಅವಿವಾಹಿತರಾಗಿಯೇ ಇದ್ದು ವೃದ್ಧತ್ವವನ್ನು ಪಡೆಯುತ್ತಿರುವ ಬ್ರಾಹ್ಮಣ ಸ್ತ್ರೀಯರು ಸಮಾಜದಲ್ಲಿಂದು ಕಾಣಸಿಗುತ್ತಾರೆ ವಿವಾಹ ಪೂರ್ವದಲ್ಲಿ ಋತುಶಾಂತಿ ಯನ್ನು ಅಲ್ಲಗಳೆಯುವವರು ಇಂತಹ ಸ್ತ್ರೀಯರಿಗೆ ಋತುಶಾಂತಿಲೋಪವನ್ನು ಅನುಮತಿಸುತ್ತಾರೆಂದು ತೋರುತ್ತದೆ.

ಪುರೋಹಿತ ಶಂಕರನಾರಾಯಣ ಭಟ್ಟ
25-6-85

ಶ್ರೀಯುತರ ಎರಡು ಕಾಗದಗಳಿಂದ ಉದ್ಧೃತ

ಪಂಡಿತ ಶ್ರೀ ಯಮರ್ಯುಂಜ ಶಂಕರ ಜೋಯಿಸರು
ಬೀಡಿಗೆ ಕೆದಿಲ ದ. ಕ. 574220

ವಿಮರ್ಶೆಯ ದೃಷ್ಟಿಯಿಂದ ಹೇಳುವದಾದರೆ ಇಂದು ನಮ್ಮೆದುರಿಗಿರುವ ಕೆಲವು ಸ್ಮೃತಿ ಗ್ರಂಥಗಳೂ ಪ್ರಯೋಗ ಗ್ರಂಥಗಳೂ ಕೂಡ ಭಾರತದಲ್ಲಿ ಮುಸಲಮಾನರ ಆಡಳಿತದ ಅನಂತರದವು ಎನ್ನಬಹುದು. ಸ್ಮೃತಿಚಂದ್ರಿಕೆಯೇ ಮೊದಲಾದ ಕೆಲವು ಸ್ಮೃತಿಗ್ರಂಥಗಳೂ ಮೂಲಸೂತ್ರಗಳೂ ಕೂಡ ಅವರ ಆಳ್ವಿಕೆಗೆ ಮೊದಲಿನವು ಈ ಪ್ರಾಚೀನ ಶಾಸ್ತ್ರ-ಸೂತ್ರಗ್ರಂಥಗಳನ್ನು ಮುಂದಿಟ್ಟುಕೊಂಡು ನೋಡಿದಾಗ ಭಾರತದಲ್ಲಿ ಹಿಂದೆ ಪ್ರೌಢಾ ವಿವಾಹವೇ ಬಳಕೆಯಲ್ಲಿತ್ತೆಂದು ಹೇಳಬೇಕಾಗುತ್ತದೆ. ವಿವಾಹದ ನಾಲ್ಕನೇ ದಿನ (ಚತುರ್ಥ್ಯಾಂ ರಾತ್ರೌ) ಪಕ್ವ ಹೋಮದ ಅನಂತರ ಉಪ ಸಂವೇಶನದೊಡನೆ ಋತು ಸಂವೇಶನವನ್ನು ತಂದು 'ವಿಷ್ಣುರ್ಯೋನಿಂ ಕಲ್ಪಯತು' ಎಂಬೀ ಮಂತ್ರಸಮುದಾಯದೊಂದಿಗೆ ಅಲ್ಲಿನ ಕ್ರಿಯಾ ಕಲಾಪವನ್ನೂ ಸಹ ಗೃಹ್ಯ ಸೂತ್ರದಲ್ಲಿ ವಿಧಿಸಿದ್ದು ಕಂಡುಬರುತ್ತದೆ. ಅಲ್ಲದೇ ಮುಂದೆ ಗರ್ಭಾಧಾನ ಪುಂಸವನ ಪ್ರಯೋಗಗಳ ಅನುಪೂರ್ವಿ ಕಂಡುಬರುತ್ತದೆ. ಇಲ್ಲಿ ಋತುಶಾಂತಿ ಯಾವಾಗ ? ಋತುಶಾಂತಿ ಪ್ರಕರಣದಲ್ಲಿ ಶಾಂತಿಯನ್ನು ಹೇಳಿ 'ಏವಂ ಯದಿ ಶಾಂತಿಂ ಕುರ್ಯಾತ್ ಸರ್ವದೋಷಾತ್ ಪ್ರಮುಚ್ಯತೇ ನಾರೀ' ಈ ಶಾಂತಿಯಿಂದ ಸ್ತ್ರೀಯು ಪರಿಶುದ್ಧ ಳಾಗುವಳೆಂದು ಹೇಳಿದ್ದಾರೆ. ಉತ್ತಮವಾದ ಸಂತತಿ, ಸೌಭಾಗ್ಯ, ಸಂಪತ್ತುಗಳಿಗಾಗಿ ಈ ಶಾಂತಿಯನ್ನು ಹೇಳಿಲ್ಲವಷ್ಟೇ. (ಹಾಗೊಂದೊಮ್ಮೆ ಹೇಳಿದ್ದಿದ್ದರೆ ಆಗ ಋತು ಶಾಂತಿಯಲ್ಲಿ ಪತಿಯೇ ಕರ್ತೃವಾಗಬೇಕೆಂದು ವಾದಿಸಬಹುದಿತ್ತು.) ಋತುಮತಿಯು ರಾದೊಡನೆ ತಂದೆಯು ಕರ್ತೃವಾಗಿದ್ದು ಋತುಶಾಂತಿಯನ್ನು ನೆರವೇರಿಸದಿದ್ದಲ್ಲಿ 'ದ್ಯೂನೇ ಜರಾಂ ಗಚ್ಛತಿ' ಎಂದು ವರಾಹಮಿಹಿರರು ಹೇಳಿದ ಹೆಣ್ಣುಮಕ್ಕಳಿಗೆ ದೋಷ ಪರಿಹಾರಕ್ಕಾಗಿ ಮಾಡಬೇಕಾದ ಶಾಂತಿಯೇ ಲುಪ್ತವಾಗುತ್ತದೆ.

ಮಗಳ ವಿವಾಹದ ವರೆಗಿನ ಎಲ್ಲ ಶುಭಾಶುಭಗಳಿಗೂ ತಂದೆಯೇ ಜವಾಬ್ದಾರ. ಮುಸಲಮಾನರೂ ಧರ್ಮಬಾಹಿರರಲ್ಲವಾದ್ದರಿಂದವಿವಾಹಿತಕನ್ಯೆಯರ ಮೇಲೆ ಅವರು ಕಣ್ಣಿಡುವ ಪದ್ಧತಿ ಇಲ್ಲದ್ದರಿಂದ ಹಿಂದುಗಳು ಮುಸಲಮಾನರ ಭಯದಿಂದ ಬಾಲ್ಯವಿವಾಹವನ್ನು ಬಳಕೆಗೆ ತಂದರೆಂದು ವಿಮರ್ಶಕರು ಹೇಳುತ್ತಾರೆ. ಅಲ್ಲಿಂದ ಮುಂದೆ ಬೆಳೆದು ಬಂದ ಬಾಲ್ಯವಿವಾಹ ಕಾಲದಲ್ಲಿಯೇ ವೆಂಕಟೇಶೀ ಪ್ರಯೋಗರತ್ನ ಮಾಲೆಯು ತಯಾರಾದ್ದರಿಂದ ಋತುಶಾಂತಿ–ಗರ್ಭಾಧಾನ ಹೋಮಗಳನ್ನು ಸಮಾನ ತಂತ್ರದಿಂದ ಅಳವಡಿಸಿದರು.

ಈ ಎಲ್ಲ ಹಿನ್ನೆಲೆಗಳನ್ನು ಮನದಂದು ನಮ್ಮ ದೊಡ್ಡಪ್ಪನವರಾದ ಶ್ರೀ ಯಮುರ್ಗಂಜ ಶಂಕರ ಜೋಯಿಸರು ಮತ್ತು ಪುರೋಹಿತ ಶ್ರೀ ಕೃಷ್ಣಭಟ್ಟರು ಪರಕ್ಕಜೆ ಶ್ರೀ ನಾರಾಯಣ ಭಟ್ಟರು ಹಾಗೂ ಇನ್ನಿತರರೂ ಕೆಲವರು ವಿದ್ವಾಂಸರು ವಿಚಾರ ವಿಮರ್ಶೆ ಮಾಡಿ ಪ್ರಥಮ ರಜೋದರ್ಶನ ಕಾಲದಲ್ಲಿ ಹೆಣ್ಣುಮಕ್ಕಳಿಗೆ ಸಂಭವಿಸ್ಸಬಹುದಾದ ಕಾಲದೋಷದ ಶಾಂತಿಯನ್ನೂ ವಿವಾಹಕ್ಕೆ ಮುಂಚೆಯೇ ನೆರವೇರಿಸುವ ಪದ್ಧತಿಯನ್ನು ಜಾರಿಗೆ ತಂದರು. ಅಂದಿನಿಂದ ನಮ್ಮಲ್ಲಿ, ಋತುಮತಿಯರಾದ ಕನ್ನಿಕೆಯರಿಗೆ ಋತುಶಾಂತಿ ಮಾಡದೇ ವಿವಾಹ ಮಾಡುವದೇ ಇಲ್ಲ.

ವಿವಾಹದ ಪೂರ್ವದಲ್ಲಿ ಮಗಳಿಗೇನಾದರೂ ಜ್ವರಾದಿರೋಗಗಳು ತಗಲಿದರೆ ಆಗ ತಂದೆಯು ಅಳಿಯನ ದಾರಿಕಾಯದೇ ಮಗಳಿಗೆ ತಕ್ಕ ಚಿಕಿತ್ಸೆ ಮಾಡಿಸಿ ಅವಳ ಆರೋಗ್ಯವನ್ನು ಕಾಪಾಡುವದಿಲ್ಲವೇ ? ಹಾಗೆಯೇ ಪ್ರಥಮರಜೋದರ್ಶನದ ಹೊತ್ತಿಗೆ ಮಗಳಿಗಿನ್ನೂ ಮದುವೆಯಾಗದಿದ್ದಲ್ಲಿ–ಪಂಚಾಂಗದ ಪ್ರಕಾರ ಅವಳಿಗೆ ದೋಷವೇನಾದರೂ ತಟ್ಟಿದೆಯೆಂದಾದರೆ–ಮಾಸ ತಿಥ್ಯಾದಿಗಳೆಂಬ ಅವಾಂತರ ಕಾಲ ವಿಭಾಗಗಳ ಪೈಕಿ ಒಂದೆರಡಾದರೂ ದುಷ್ಟವಾಗಿದ್ದೇ ಇರುತ್ತವೆನ್ನಬಹುದು – ಆ ದೋಷದೂರೀಕರಣಕ್ಕಾಗಿ ಮಗಳ ಕ್ಷೇಮಾಭ್ಯುದಯವನ್ನು ಸಂಕಲ್ಪಿಸಿ ತಂದೆಯೇ ವಿದ್ಧ್ಯುಕ್ತಶಾಂತಿಯನ್ನು ನೆರವೇರಿಸುವದರಲ್ಲಿ ಶಾಸ್ತ್ರವ್ಯಾಕೋಪವೇನೂ ಕಂಡು ಬರುವದಿಲ್ಲ.

—ಯಮುರ್ಗಂ ಶಂಕರ ಜೋಯಿಸ್

18–6–85ರ ಶ್ರೀಯುತರ ಒಂದು ಕಾಗದದಿಂದ

o o o o

ಶ್ರೀಯುತ ಹೆಚ್. ಡಿ. ರಾಮಕೃಷ್ಣಭಟ್ಟರು
ಹೊರಬೈಲು, PO ಬಿ. ದೊಡ್ಡೇರಿ
ಸೊರಬ ತಾಲ್ಲೂಕ್. 577434

ಕನ್ಯೆಯರು ಮೊಟ್ಟಮೊದಲು ಋತುಮತಿಯರಾದಾಗ ಮಾಸತಿಥಿವಾರನಕ್ಷತ್ರ ಯೋಗಕರಣಲಗ್ನಯಶಾವಶಾದಿಗಳನ್ನು ಅವಶ್ಯವಾಗಿ ಗುರುತಿಸಿಟ್ಟುಕೊಳ್ಳಬೇಕು. ಇದರಿಂದ ಆ ಕಾಲದಲ್ಲಿ ಅವಳಿಗೆ ದುಷ್ಟಕಾಲದ ಪ್ರಯುಕ್ತವಾಗಿ ದೋಷಗಳೇನಾದರೂ ಸಂಭವಿಸುವಂತಿದೆಯೇ ಎಂದು ತಿಳಿದುಕೊಂಡು ಅದರ ಪರಿಹಾರಕ್ಕೆ ವಿದ್ಧ್ಯುಕ್ತ ಶಾಂತಿ ಮಾಡಲು ಅನುಕೂಲವಾಗುವದು. ತಿಥ್ಯಾದಿಗಳು ದುಷ್ಟವಾಗಿದ್ದರೆ ಹುಡುಗಿಗೆ ಅಂಟಿಕೊಳ್ಳುವ ದೋಷಗಳು ಯಾವ ಯಾವುದೆಂಬುದನ್ನು ಶಾಸ್ತ್ರಕಾರರು

ಪಟ್ಟಿ ಮಾಡಿತೋರಿಸಿದ್ದಾರೆ.* ದೋಷಗಳೇನಾದರೂ ಇದ್ದರೆ ಪ್ರಯೋಗಕಾರರು ಹೇಳಿರುವಂತೆ ಪ್ರಥಮರಜೋದರ್ಶನದ ಶುದ್ಧಿಸ್ನಾನಾನಂತರ ಐದನೇ ದಿನ ತಂದೆಯೇ ಕರ್ತೃವಾಗಿ ಮಗಳ ಕ್ಷೇಮಕ್ಕಾಗಿ ಈ ಶಾಂತಿಯನ್ನು ನೆರವೇರಿಸುವದು ಚಿತ.

ಕೈಕಾಲಿಲ್ಲದವರು, ಕುರುಡಿ-ಕವುಡ-ಮೂಕಿಯರು, ಇನ್ನಾವುದೇ ಬಗೆಯ ಹೆಳವರು, ಕುಷ್ಠ, ಅಪಸ್ಮಾರಾದಿರೋಗಗ್ರಸ್ತರು, ದೀರ್ಘರೋಗಿಗಳು ಅಥವಾ ಕುರೂಪಿಗಳಾಗಿದ್ದವರು ಅಥವಾ ಯಾವುದೇ ಬಗೆಯ ಪ್ರತ್ಯಕ್ಷದೋಷಗಳೇನೂ ಇಲ್ಲ ದಿದ್ದರೂ ವರಸಿಗದೇ ಇದ್ದುದರಿಂದ ವಿವಾಹವಿಲ್ಲದೇ ನಿಂತವರು ಇತ್ಯಾದಿ ಹೆಣ್ಣು ಮಕ್ಕಳಿಗೆ ಈ ರಜೋದೋಷಶಾಂತಿಯೇ ತಪ್ಪಿಹೋಗುವ ಸಂಭವವಿದೆ. ಅಂಥ ವರಿಗೆ ಈ ಶಾಂತಿ ಬೇಕಾಗಿಲ್ಲೆಂದು ಶಾಸ್ತ್ರಾನುಜ್ಞೆಯೇನೂ ಇದ್ದಂತಿಲ್ಲ. ಕಾರಣ ಇಂದಿನ ಕಾಲದಲ್ಲಿ ಮದುವೆಗೆ ಮೊದಲೇ ಸರ್ವೇಸಾಮಾನ್ಯವಾಗಿ ಎಲ್ಲ ಹೆಣ್ಣು ಮಕ್ಕಳೂ ಕೂಡ ಮದುವೆ ಅವಧಿಗಿಂತ ಮೊದಲೇ ಋಮತಿಯರಾಗುತ್ತಿರುವದರಿಂದ ಪ್ರಥಮರಜೋದರ್ಶನದ ಐದನೇ ದಿನವೇ ಎಲ್ಲ ಹೆಣ್ಣು ಮಕ್ಕಳಿಗೂ ಈ ಶಾಂತಿ ಯನ್ನು ನೆರವೇರಿಸುವದು ಶಾಸ್ತ್ರ ದೃಷ್ಟಿ ಹಾಗೂ ಔಚಿತ್ಯದೃಷ್ಟಿಯಿಂದ ಸಮಂಜಸ ವೆನಿಸುತ್ತದೆಂಬುದು ನಮ್ಮ ಅಭಿಪ್ರಾಯ.

ಹತ್ತು ಹನ್ನೊಂದು ವರ್ಷಗಳು ತುಂಬುವದರೊಳಗಾಗಿಯಾದರೂ ಹೆಣ್ಣು ಮಕ್ಕಳಿಗೆ ಮದುವೆ ಮಾಡಬೇಕೆಂಬುದು ಶಾಸ್ತ್ರತಾತ್ಪರ್ಯ. ಕನ್ಯಾಸಂಸ್ಕಾರ ಗಳನ್ನು ಮದುವೆಯ ಹಿಂದಿನ ದಿನ ಒಟ್ಟಿಗೇ ಮಾಡುವ ಪದ್ಧತಿಯು ಹಿಂದಿನಕಾಲ ದಲ್ಲಿ ಸರಿಹೋಗುತ್ತಿತ್ತೇನೋ ! ಇಂದು ಮೂವತ್ತು ಮೂವತ್ತೆರಡು ವರ್ಷಗಳ ವರೆಗೂ ನಮ್ಮ ಹೆಣ್ಣು ಮಕ್ಕಳು ಮದುವೆ ಯಾಗದೇ ಕುಳಿತಿರುವ ಕಾಲದಲ್ಲೂ ಮದುವೆಯ ಜೊತೆಯಲ್ಲೇ ಕನ್ಯಾಸಂಸ್ಕಾರವನ್ನೂ ಮಾಡೋಣ ಮುಖ್ಯಕಾಲಾತಿ ಪತ್ತಿ ದೋಷನಿವಾರಣೆಗಾಗಿ ಹೇಗೂ ಪ್ರಯೋಗಕಾರರು ಪ್ರಾಯಶ್ಚಿತ್ತ ಹೇಳಿದ್ದಾರೆ. ಎಂಬುದು ಅಷ್ಟು ಸಮಂಜಸವಾಗಿ ಕಾಣುವದಿಲ್ಲ. ಕಾರಣ ರಜೋದರ್ಶನಕ್ಕೆ ಮುಂಚಿತವಾಗಿ ಕನ್ಯಾಸಂಸ್ಕಾರಗಳನ್ನು ನೆರವೇರಿಸುವದು ಸೂಕ್ತವೆನ್ನಬಹುದು. ಪ್ರಥಮರಜೋದರ್ಶನದ ಸಮಯದಲ್ಲಿ ಹುಡುಗಿಗೆ ದೋಷವೇನಾದರೂ ಇದೆ ಯೆಂದಾದರೆ ತತ್ಪರಿಹಾರಕ್ಕಾಗಿ ಮಾಡಬೇಕಾದ ಋತುಶಾಂತಿಯ ಪೂರ್ವದಲ್ಲಾ ದರೂ ಕನ್ಯಾಸಂಸ್ಕಾರಗಳು ನೆರವೇರಲೇಬೇಕಷ್ಟೇ. ಕಾರಣ ಹೆಣ್ಣುಮಕ್ಕಳ ಶ್ರೇಯೋಭಿವೃದ್ಧಿಗಾಗಿ ಅವರವರ ತಂದೆತಾಯಿಗಳು ಮುತುವರ್ಜಿ ವಹಿಸಿ ಪ್ರಥಮ ರಜೋದರ್ಶನದ ಐದನೇ (ಅಥವಾ ದ್ವಿತೀಯ ರಜೋದರ್ಶನದ ಐದನೇ ದಿನವಾದರೂ)

ಕನ್ಯಾ ಸಂಸ್ಕಾರ ಪೂರ್ವಕ ಋತುಶಾಂತಿಯನ್ನು ನೆರವೇರಿಸುವದು ಒಳ್ಳೇದೆಂದು ಹೇಳ ಬಹುದು.

—ಹೆಚ್. ಡಿ. ರಾಮಕೃಷ್ಣ ಭಟ್ಟ

ಸದ್ಯದ ವಸತಿ :
ಕ್ವಾರ್ಟರ್ಸ್ ನಂ 18.
8ನೇ ಅವೆನ್ಯೂ ಪಣಂಪೂರು ದ.ಕ.
575010.

(ಶ್ರೀಯುತರ 'ಅಸಂಸ್ಕೃತ ಕನ್ಯಾ ರಜೋ ದೋಷಶಾಂತಿಃ ಪ್ರಥಮ, ದ್ವಿತೀಯ ಮುದ್ರಣಗಳು' (1983. 84 :) 'ಶಾಸ್ತ್ರಿಗಳ ಶಾಂತಿ ವಿಮರ್ಶೆಗೆ ಉತ್ತರ' (1-3-85) 'ಶಾಸ್ತ್ರಿಗಳ ಋತುಶಾಂತಿಕರ್ತೃತ್ವಾಧಿಕಾರಮೀಮಾಂಸೆಗೆ ಉತ್ತರ' 24-6-85) ಗಳಿಂದ ಶ್ರೀಯುತರ ಅಭಿಪ್ರಾಯಗಳ ಸಂಕಲನೆ)

*ವಿದ್ವಾನ್ ಶ್ರೀಮಾನ್ ರಾಮಚಂದ್ರ ಶಾಸ್ತ್ರೀ ಸೂರೀ ಅವರ 'ಋತುಶಾಂತಿಕರ್ತೃತ್ವಾಧಿಕಾರ ಮೀಮಾಂಸೆ' ಲೇಖನದಲ್ಲಿ ಈ ದೋಷಗಳ ವಿವರಣೆ ಬಂದಿದೆ.

o o o o o

ತ್ರಿವೇದೀ ಹೆಚ್. ಲಕ್ಷ್ಮೀನಾರಾಯಣ ಭಟ್ಟರು
ಓಲ್ಡ್ ಪೋಸ್ಟ್ ಆಫೀಸ್ ರೋಡ್, ಶಿವಮೊಗ್ಗಾ

ಹೆಣ್ಣು ಮಕ್ಕಳು ರಜಸ್ವಲೆಯರಾಗಿ ಬಹು ವರ್ಷದವರೆಗೂ ಸಂಸ್ಕಾರರಹಿತೆ ರಾಗಿ ಶೂದ್ರರಂತೆ ಇದ್ದು ವಿವಾಹಕಾಲದಲ್ಲಿಯೂ ಅದರ ಕಡೆಗೆ ಗಮನ ಕೊಡದೇ ಅಪವಿತ್ರಳಾದ ಕನ್ಯೆಯನ್ನು ದಾನಮಾಡುವದು ಮತ್ತು ವರನು ಸ್ವೀಕರಿಸುವದೂ ಶಾಸ್ತ್ರದೃಷ್ಟಿಯಿಂದ ತುಂಬಾ ಅನ್ಯಾಯವಾಗುವದು. ರಜಸ್ವಲಾಸ್ತ್ರೀಯರಿಗೆ ವಿವಾಹ ಕಾಲದಲ್ಲಿ ಸಂಸ್ಕಾರ ಮಾಡುವದೂ ಕೂಡ ಯಾವಾಗಲೋ ಪ್ರಾಪ್ತವಾದ ಅಶೌಚ ವನ್ನು ಯಾವಾಗಲೋ ಶುದ್ಧಿ ಮಾಡಿಕೊಂಡ ಹಾಗೆ ಆಗುವದು. ಕನ್ಯಾಪ್ರಥಮ ರಜೋದರ್ಶನದಲ್ಲಿಯೇ ತದುಕ್ತಶಾಂತಿಯನ್ನು ಕನ್ಯಾಪಿತನು ಮಾಡುವದು ಉಚಿತ,

ತ್ರಿವೇದೀ, ಹೆಚ್. ಲಕ್ಷ್ಮೀನಾರಾಯಣ ಭಟ್ಟ
5-1-83

ವಿದ್ವಾನ್ ಶ್ರೀ ಕೆ. ಎಸ್. ಭಾಸ್ಕರ ಭಟ್ಟರು
ಭೀಮನ ಕೋಣೆ—ಸಾಗರ

ಋತುಮತಿಯರಾದ ಕನ್ಯೆಯರಿಗೆ ಅವಶ್ಯ ಆಗಬೇಕಾದ ಸ್ತ್ರೀಸಂಸ್ಕಾರವು ಇಲ್ಲದೇ ಹೋದರೆ ಅವರು ಹವ್ಯ-ಕವ್ಯಗಳಲ್ಲಿ ಭಾಗವಹಿಸಲು ಅಡ್ಡಿಯಾಗುದರಿಂದ ಅವರ ಆಧ್ಯಾತ್ಮಿಕವಾದ ಆಚರಣೆಯೂ ಕೂಡ ಪರಿಶುದ್ಧವಾಗಲಾರದು. ಆದುದರಿಂದ ಕನ್ಯಾರಜೋದೋಷ ಶಾಂತಿ ಹಾಗೂಸ್ತ್ರೀಸಂಸ್ಕಾರಗಳನ್ನು ಮದುವೆಗೆ ಮುಂಚಿತವಾಗಿಯೇ ನಿರ್ವಹಿಸುವದು ಒಳ್ಳೆಯದು.

—ಕೆ. ಎಸ್. ಭಾಸ್ಕರ ಭಟ್ಟ

'ಅಸಂಸ್ಕೃತ ಕನ್ಯಾರಜೋದೋಷ ಶಾಂತಿ'ಯ ಮೊದಲ ಮುದ್ರಣದ ಮುನ್ನುಡಿಯಿಂದ ಉದ್ಧೃತ.

o o o o

ಪಂಡಿತ ಶ್ರೀ ಕೋ. ಅನಂತಪದ್ಮನಾಭ ಶಾಸ್ತ್ರೀ
4-27 ಬಪ್ಪನಾಡು, ಮುಲ್ಕಿ
ದ. ಕ. 574154

'ಅಸಂಸ್ಕೃತ ಕನ್ಯಾರಜೋದೋಷ ಶಾಂತಿಃ' ಇತಿ ಪುಸ್ತಿಕಾ ಅವಲೋಕಿತಾ। ಪ್ರಯತ್ನಃ ಅಭಿನಂದನೀಯಃ ಸ್ಪೃಹಣೀಯಃ ಆದರಣೀಯಶ್ಚೇತಿ ಅತ್ರ ಮತಾಂತರಂ ನ ವಿದ್ಯೇತ॥

—ಕೋ. ಅನಂನಪದ್ಮನಾಭ ಶಾಸ್ತ್ರೀ
24-3-83

ಅಸಂಸ್ಕೃತಕ ಕನ್ಯಾರಜೋದೋಷ ಶಾಂತಿಯ ಎರಡನೆಯ ಮುದ್ರಣದಿಂದ ಉದ್ಧೃತ.

o o o o

ವಿದ್ವಾನ್ ಶಿರೋಮಣಿ
ಶ್ರೀಮಾನ್ ಕೆ. ಗಣಪತಿ ಸೋಮಯಾಜಿಗಳು
'ಶ್ರೀ ಗಣೇಶ ಕೃಪಾ'
1237, 25ಎ ಮೈನ್, 9ನೇ ಬ್ಲಾಕ್
ಜಯನಗರ, ಬೆಂಗಳೂರು-560069

ಋತುಶಾಂತಿ–ಭುವನೇಶ್ವರೀ ಶಾಂತಿಗಳು ಹೆಣ್ಣುಮಕ್ಕಳಿಗೆ ಪ್ರಥಮ ರಜೋದರ್ಶನದಲ್ಲಿ ದುಷ್ಟಕಾಲ ಪ್ರಯುಕ್ತವಾಗಿ ಸಂಭವಿಸಬಹುದಾದ ದೋಷಗಳ ನಿವಾರಣೆಗಾಗಿ ವಿಹಿತವಾಗಿರುವುದರಿಂದ ಇಂದು ಈ ಶಾಂತಿಯನ್ನು ಪ್ರಥಮ ರಜೋದರ್ಶನದ ಐದನೇ ದಿನವೇ ತಂದೆಯು ನೆರವೇರಿಸಬಹುದು. ಮಗಳ ಯೋಗ–ಕ್ಷೇಮಕ್ಕಾಗಿ ಈ ಶಾಂತಿಯನ್ನು ತಂದೆಯು ಮಾಡುವದರಲ್ಲಿ ಅನೌಚಿತ್ಯವೇನೂ ಇಲ್ಲ. ಪ್ರಯೋಗಗಳಲ್ಲಿ 'ಮಮ ಪತ್ನ್ಯಾಃ.... ಎಂದು ಬರೆದಿದ್ದಮಟ್ಟಿಗೆ ವಿವಾಹ ಪೂರ್ವದಲ್ಲಿ ಈ ಶಾಂತಿಯನ್ನು ನೆರವೇರಿಸಲಾಗದೆಂದೇನೂ ಅರ್ಥವಾಗುವದಿಲ್ಲ.

—ಕೆ. ಗಣಪತಿ ಸೋಮಯಾಜೀ
16–7–85

o o o o

# ವೈಶ್ವಾನರೇಷ್ಟೇಃ ಪುತ್ರಗತಪೂತತ್ವಾದಿಫಲ ಪ್ರಯುಕ್ತತ್ವಾಧಿಕರಣಂ

ಫಲಸಂಯೋಗಸ್ತ್ವಚೋದಿತೇ ನ ಸ್ಯಾತ್।
ಅಶೇಷಭೂತತ್ವಾತ್। (ಜೈಮಿನೀಯಸೂತ್ರಂ ೪-೩-೩೮)

ವೈಶಾಂನರಂ ದ್ವಾದಶಕಪಾಲಂ ನಿರ್ವಪೇತ್ ಪುತ್ರೇಜಾತೇ – ಇತಿ ವಿಧಾಯ ಆಮ್ನಾಯತೇ–ಯಸ್ಮಿನ್ ಜಾತೇ ಏತಾಮಿಷ್ಟಿಂ ನಿರ್ವಪತಿ ಪೂತಏವಸ ತೇಜಸ್ವ್ಯನ್ನಾದ ಇಂದ್ರಿಯಾವೀ ಪಶುಮಾನ್ ಭವತಿ ಇತಿ। ತತ್ರ ಸಂದೇಹಃ। ಕಿಮಾತ್ಮನಿ:ಶ್ರೇಯಸಾಯ? ಉತ ಪುತ್ರನಿ:ಶ್ರೇಯಸಾಯೇತಿ। ನೇಮಾನಿ ಫಲದಾನಿ ಪರಸ್ಯ ಭವಂತಿ ಕರ್ಮಾಣಿ। ಕುತಃ? ಆಧಾನೇ ಆತ್ಮನೇಪದನಿರ್ದೇಶಾತ್। ಯಥಾ–ಯದ್ಯೇಕಂ ಕಪಾಲಂ ನಶ್ಯೇದೇಕೋ ಮಾಸಃ ಸಂವತ್ಸರಸ್ಯಾಪೇತಃ ಸ್ಯಾತ್। ಅಥಯಜಮಾನಃ ಪ್ರಮೀಯೇತ, ದ್ಯಾವಾಪೃಥಿವೀಮೇಕಕಪಾಲಂ ನಿರ್ವಪೇತ್। ಯದಿ ದ್ವೇ ನಶ್ಯೇಯಾತಾಂ, ದ್ವೌ ಮಾಸೌ ಸಂವತ್ಸರಸ್ಯಾಪೇತೌ ಸ್ಯಾತಾಂ। ಅಥಯಜಮಾನಃ ಪ್ರಮೀಯೇತ. ಆಶ್ವಿನಂದ್ವಿಕಪಾಲಂ ನಿರ್ವಪೇತ್। ಸಂಖ್ಯಾಯೋದ್ವಾಸಯತಿ ಯಜಮಾನಸ್ಯ ಗೋಪೀಥಾಯೇತಿ ಕಪಾಲನಾಶೇ ನಿಮಿತ್ತೇ ಆತ್ಮನಿ:ಶ್ರೇಯಸಫಲಂ ಕರ್ಮ ದರ್ಶಯತಿ। ಏವಮಿಹಾಪಿ ದ್ರಷ್ಟವ್ಯಂ। ತಸ್ಮಾದಾತ್ಮನಿ:ಶ್ರೇಯಸಾರ್ಥಮಿತಿ।

ಏವಂ ಪ್ರಾಪ್ತೇ ಬ್ರೂಮಃ—ಫಲಸಂಯೋಗೋನಸ್ಯಾತ್ ಪಿತುಃ। ಫಲವಚನಂ ಶೇಷಭೂತಂ ಪುತ್ರಸ್ಯ. ನ ಪಿತುಃ। ಕಥಂ? ಏವಂ ಶ್ರೂಯತೇ—ವೈಶ್ವಾನರಂದ್ವಾದಶಕಪಾಲಂ ನಿರ್ವಪೇತ್ ಪುತ್ರೇ ಜಾತೇ। ಯದಷ್ಟಾಕಪಾಲೋ ಭವತಿ ಗಾಯತ್ರ್ಯೈವೇನಂ ಬ್ರಹ್ಮವರ್ಚಸೇನ ಪುನಾತಿ। ಯನ್ನವಕಪಾಲೋ ಭವತಿ ತ್ರಿವೃತೈವಾಸ್ಮಿಂಸ್ತೇಜೋದಧಾತಿ। ಯದೇಕಾದಶಕಪಾಲಸ್ತ್ರಿಷ್ಟುಭೈವಾ ಸ್ಮಿನ್ನಿಂದ್ರಿಯಂ ದಧಾತಿ। ಯದ್ದ್ವಾದಶಕಪಾಲೋ ಜಗತ್ಯೈವಾಸ್ಮಿನ್ ಪಶೂನ್ ದಧಾತಿ। ಯಸ್ಮಿನ್ ಜಾತ ಏತಾಮಿಷ್ಟಿಂ ನಿರ್ವಪತಿ, ಪೂತ ಏವಸ ತೇಜಸ್ವ್ಯನ್ನಾದ ಇಂದ್ರಿಯಾವೀ ಪಶು

ಪಶೂನ್ಭವತಿ। ಇತಿ। ಯೋ ಜಾತಸ್ತತ್ರಫಲಂ ಶ್ರೂಯತೇ। ನಾಸ್ತಿ ವಚನಸ್ಯಾತಿಭಾರಃ। ತಸ್ಮಾತ್ ಪುತ್ರಸ್ಯ ಫಲಮಿತಿ। ಯದುಕ್ತಂನ ಪರಸ್ಯ ಫಲದಾನ್ಯೇತಾನಿ ಕರ್ಮಾಣೀತಿ. ತದುಚ್ಯತೇ–ಯತ್ಪುತ್ರಸ್ಯ ಫಲಂ. ಆತ್ಮನಃ ಸಾ ಪ್ರೀತಿಃ। ತಸ್ಮಾದಾತ್ಮನೇಪದಂ ನವಿರುಧ್ಯತೇ। ಏತಾಮೇವಾತ್ಮನಃ ಪ್ರೀತಿಮಭಿಪ್ರೇತ್ಯ ಭವತಿ ವಚನಂ। ಆತ್ಮಾವೈ ಪುತ್ರ ಇತಿ।

ಅಂಗಾದಂಗಾತ್ಸಂಭವಸಿ ಹೃದಯಾದಧಿ ಜಾಯಂಸೇ। ಆತ್ಮಾವೈ ಪುತ್ರನಾಮಾಸಿ ಸ ಜೀವ ಶರದಃ ಶತಂ॥ ಇತಿ।

ಪೂಜ್ಯ ಶ್ರೀ ಶಬರಸ್ವಾಮಿಗಳು. —ಮೀಮಾಂಸಾದರ್ಶನಂ–ಶಾಬರಭಾಷ್ಯಂ।

○ ○ ○ ○

ಅರ್ಥವಾದೋ ರಾತ್ರಿಸತ್ರನ್ಯಾಯೇನ ಫಲಪ್ರತ್ಯಯಾರ್ಥಃ ಇತಿ ಸ್ಥಿತೇ–ಕಿಂ ಪುತ್ರಜನ್ಮನಿಮಿತ್ತಂ ಪಿತುಃ ಫಲಮುತ ಪುತ್ರಸ್ಯೇತಿ। ಪುತ್ರಸ್ಯೈವ, ಕುತಃ? ಯಸ್ಮಿನ್ ಜಾತೇ ಏತಾಮಿಷ್ಟಿಂ ನಿರ್ವಪತಿ ಪೂತ ಏವಸಃ' ಇತಿ ಸರ್ವನಾಮ್ನಾ ಪುತ್ರಸ್ಯ ಫಲಂ ಪ್ರತಿಪಾದ್ಯತೇ। ಪೂತಏವಸಃ ಕಃ? ಯೋ ಜಾತಃ। ಇತಿ। ಅತೋ ವಚನಸಾಮರ್ಥ್ಯಾತ್ ಪುತ್ರಸ್ಯೈವ ಫಲಂ। ಪವನಾದಿಸಂಯುಕ್ತಃ ಪುತ್ರಃ ಇಷ್ಯತ ಏವೇತ್ಯಾತ್ಮನೇ ಪದಮವಿರುದ್ಧಂ, —ಪೂಜ್ಯ ಶ್ರೀ ಕುಮಾರಿಲಭಟ್ಟರು–ಟುಪ್‌ಟೀಕಾ,

○ ○ ○ ○ ○

ವೈಶ್ವಾನರೇಷ್ಟ್ಯಾ ಪೂತತ್ವಂಪಿತುಃ ಪುತ್ರಸ್ಯ ವಾಕ್ಯಗ್ರಿಮಃ। ಕರ್ತುರೇವ ಫಲಂ ಯುಕ್ತಂ ಕರ್ತೃತ್ವಂ ಪಿತುರೇವ ಹಿ॥ ಜಾತೇ ಯಸ್ಮಿನ್ನಿಷ್ಟಿಮೇತಾ ನಿರ್ವಪೇತ್ತಸ್ಯ ಪೂತತಾ। ತಚ್ಚೇಷ್ಟಿತಂ ಪಿತಂಸ್ತೇನ ಪಿತಾ ತತ್ರ ಪ್ರವರ್ತತೇ॥

ಕಾಮ್ಯೇಷ್ಟಿಕಾಂಡೇ 'ವೈಶ್ವಾನರಂ ದ್ವಾದಶಕಪಾಲಂ ನಿರ್ವಪೇತ್ ಪುತ್ರೇ ಜಾತೇ' ಇತಿ ಪ್ರಕೃತ್ಯ ಶ್ರೂಯತೇ-ಯಸ್ಮಿನ್ ಜಾತೇ ಏತಾಮಿಷ್ಟಿಂ ನಿರ್ವಪತಿ ಪೂತ ಏವಸ ತೇಜಸ್ವೀ ಅನ್ನಾದಃ ಇಂದ್ರಿಯಾವೀ ಪಶುಮಾನ್ ಭವತಿ' ಇತಿ । ತತ್ರ ಪಿತುಃ ಪ್ರಬುದ್ಧಸ್ಯ ಕರ್ತೃತ್ವಂ, ನತು ಮುಗ್ಧಸ್ಯ ಪುತ್ರಸ್ಯ । ತತಃ ಅನುಷ್ಠಾನಫಲಯೋಃ ವೈಯಧಿಕರಣ್ಯಪರಿಹಾರಾಯ ಪಿತುರೇವ ಪೂತತ್ವಾದಿ ಫಲಮಿತಿ ಚೇತ್ —

ನೈವಂ, ಯಸ್ಮಿನ್ ಜಾತೇ ನಿರ್ವಪತಿ ಸ ಪೂತಃ. ಇತಿ ವಾಕ್ಯೇನ ಫಲಸ್ಯ ಪುತ್ರಸಂಬಂಧಾವಗಮಾತ್ । ನ ಚಾತ್ರ ನಿಷ್ಫಲಸ್ಯ ಪಿತುಃ ಪ್ರವೃತ್ತಿರಿತಿ ವಾಚ್ಯಂ । ಪುತ್ರನಿಷ್ಠಪೂತತ್ವಾದೇರೀಪ್ಸಿತತ್ವೇನ ಸ್ವಫಲಬುದ್ಧ್ಯಾ ಪ್ರವೃತ್ತಿಸಂಭವಾತ್ । ತಸ್ಮಾತ್ ಪುತ್ರಸ್ಯ ಪೂತತ್ವಾದಿಕಮಿತಿ ।

ವೈಶ್ವಾನರೇಷ್ಟಿನ್ಯಾಯಃ : (ಜಾತೇಷ್ಟಿನ್ಯಾಯಾಂತರ್ಗತವೈಶ್ವಾನರೇಷ್ಟೇಃ ಪುತ್ರಗತ ಪೂತತ್ವಾದಿಫಲಕತ್ವಾಧಿಕರಣಂ)

೪ನೇ ಅಧ್ಯಾಯ ೩ನೇ ಪಾದ. ೧೭ನೇ ಅಧಿಕರಣ.

ಶ್ರೀಮನ್ಮಾಧವಾಚಾರ್ಯರು : ಜೈಮಿನೀಯನ್ಯಾಯಮಾಲಾವಿಸ್ತರಃ ।

o o o o

('ಜನ್ಮಾದ್ಯಸ್ಯ ಯತಃ' ಎಂಬೀ ಬ್ರಹ್ಮಸೂತ್ರಕ್ಕೆ ಭಾಷ್ಯದ ಸಂದರ್ಭದಲ್ಲಿ ಶ್ರೀಮತ್ ಶಂಕರ ಭಗವತ್ಪಾದರ 'ಅನೇಕಕರ್ತೃಭೋಕ್ತೃ ಸಂಯುಕ್ತಸ್ಯ' ಎಂಬೊಂದು ವಾಕ್ಯಾಂಶವಿದೆ. ಇದರ ಅರ್ಥವಿವರಣೆಯ ಸಂದರ್ಭದಲ್ಲಿ ವ್ಯಾಖ್ಯಾಕಾರರು ಪೂರ್ವ ಮೀಮಾಂಸಾ ಶಾಸ್ತ್ರದ ವೈಶ್ವಾನರೇಷ್ಟ್ಯಧಿಕರಣದ ನ್ಯಾಯವನ್ನು ಉದಾಹರಿಸುತ್ತಾರೆ. ಅಲ್ಲಿರುವ ಕೆಲವು ವಾಕ್ಯಗಳನ್ನು ಇಲ್ಲಿ ಉದಾಹರಿಸಲಾಗಿದೆ.)

ಕೇಚಿತ್ತು ಭೋಕ್ತಾರಃ ಶ್ರಾದ್ಧ ವೈಶ್ವಾನರೇಷ್ಟ್ಯಾದಿಷು ಪಿತಾಪುತ್ರಾದಯಃ ನತು ಕರ್ತಾರಃ । ಕೇಚಿತ್ತು ಕರ್ತಾರೋ ಭವಂತಿ ಸೂದ-ಋತ್ವಿಗಾದಯಃ, ನತು ಭೋಕ್ತಾರಃ ।

ಶ್ರೀಮದ್ ವಾಚಸ್ಪತಿಮಿಶ್ರರು—ಭಾಮತೀ

o o o o

ಫಲಸಂಯೋಗಸ್ತು ಅಚೋದಿತೇ ನ ಸ್ಯಾತ್ । ಅಶೇಷಭೂತತ್ವಾತ್ । (ಜೈಮಿನೀಯಸೂತ್ರಂ : ೪.೩.೩೮.)

'ವೈಶ್ವಾನರಂ ದ್ವಾದಶಕಪಾಲಂ ನಿರ್ವಪೇತ್ ಪುತ್ರೇ ಜಾತೇ' ಇತ್ಯುಪಕ್ರಮ್ಯ 'ಯಸ್ಮಿನ್ ಜಾತೇ ಏತಾಮಿಷ್ಟಿಂ ನಿರ್ವಪತಿ, ಪೂತ ಏವ ಸ ತೇಜಸ್ವೀ ಅನ್ನಾದಃ ಇಂದ್ರಿಯಾವೀ ಪಶುಮಾನ್ ಭವತಿ' ಇತಿ ಶ್ರೂಯತೇತತ್ರ .ಕಿಂ ಪೂತತ್ವಾದಿ ಪಿತುಃ ಫಲಂ ? ಉತ ಪುತ್ರಸ್ಯ ? ಇತಿ ಸಂದೇಹೇ - ಫಲಸ್ಯ ಕರ್ತೃಗಾಮಿತ್ವನಿಯಮಾತ್ , ಇತರಥಾ ಪ್ರೇರಣಾನುಪಪತ್ತೇಃ ಪಿತುರಿತಿ ಪ್ರಾಪ್ತೇ—

ರಾದ್ಧಾಂತಃ— ಯಸ್ಮಿನ್ ಜಾತೇ ನಿರ್ವಪತಿ ಸ ಪೂತಃ ಇತಿ ಜಾತಗಾಮಿತ್ವೇನ ಫಲಾವಮ್ನಾನಾತ್ ಫಲಭೋಕ್ತೃತ್ವೇನ ಅಚೋದಿತೇ ಪಿತರಿ ಫಲಸಂಯೋಗೋ ನ ಸ್ಯಾತ್ । ವಚನಸ್ಯ ತಂ ಪ್ರತಿ ಅಶೇಷಭೂತತ್ವಾತ್ । ಯತ್ತು ಅಫಲಭಾಗಿನಃ ನ ಪ್ರೇರಣಾ ಇತಿ, ತನ್ನ. ಪೂತತ್ವಾದಿಗುಣವತ್ಪುತ್ರವತ್ತಯೈವ ಪಿತುಃ ಪ್ರೀತ್ಯುತ್ಪತ್ತೇಃ ಪ್ರೇರಣಾವಕಲ್ಪನಾತ್ । ಅತಃ ಪುತ್ರಗಾಮಿ ಫಲಮಿತಿ ।

ಶ್ರೀಮದಮಲಾನಂದರು. —ಕಲ್ಪತರುಃ ।

ಪಿತುಃ ಪ್ರೀತ್ಯುತ್ಪತ್ತೇರಿತ್ಯಸ್ಯ ಭಾವಃ—
ಪುತ್ರಗತಮಪಿ ಪೂತತ್ವಾದಿಕಂ ಪಶು-ಹಿರಣ್ಯಾದ್ಯಭಿವೃದ್ಧಿವತ್
ಪಿತುಃ ಪ್ರೀತ್ಯುತ್ಪಾದನದ್ವಾರಾ ಗೌಣಪುರುಷಾರ್ಥೋ ಭವತೀ
ತ್ಯರ್ಥಃ ॥ ಶ್ರೀಮದಪ್ಪಯ್ಯದೀಕ್ಷಿತರು—ಪರಿಮಳಃ ।

(ಬ್ರಹ್ಮಸೂತ್ರಭಾಷ್ಯ-ವ್ಯಾಖ್ಯಾನಗಳ ಈ ವಾಕ್ಯಗಳನ್ನು ವಿದ್ವಾನ್ ಕೆ. ಕೃಷ್ಣ ಜೋಯಿಸರು ಒದಗಿಸಿಕೊಟ್ಟಿದ್ದಾರೆ. ಶ್ರೀಯುತರಿಗೆ ಕೃತಜ್ಞತೆಗಳು—ಸಂ.)

ಂ ಂ ಂ ಂ

## ವೈಶ್ವಾನರೇಷ್ಟ್ಯಧಿಕರಣನ್ಯಾಯ

ಇದೊಂದು 'ಅಪವಾದಶಾಸ್ತ್ರ' 'ಸ್ವರ್ಗಕಾಮೋಯಜೇತ' ಇತ್ಯಾದಿ ಸ್ಥಳಗಳಲ್ಲಿ ಫಲಭೋಕ್ತೃತ್ವ-ಸಮಾನಾಧಿಕರಣಕವಾದ ಕರ್ತೃತ್ವವನ್ನು ಸ್ಥಾಪಿಸಲಾಗಿದೆ. 'ಆಯಾ ಕರ್ಮಗಳಿಗೆ ಹೇಳಿದ ಸ್ವರ್ಗಾದಿ ಫಲಗಳು ತನಗೆ ಬೇಕೆಂದು ಯಾರು ಬಯಸುವರೋ ಅವರೇ ಆಯಾಕರ್ಮಗಳ ಅನುಷ್ಠಾನದಲ್ಲಿ ಅಧಿಕಾರಿಗಳು' ಎಂದು ಈ 'ಉತ್ಸರ್ಗ ಶಾಸ್ತ್ರ' ದ ಪ್ರಕಾರ ಸಿದ್ಧವಾಗುತ್ತದ. ಇದಕ್ಕೆ ಅಪವಾದವಾಗಿ ಫಲಭೋಕ್ತೃತ್ವವ್ಯಧಿಕರಣಕವಾದ ಕರ್ತೃತ್ವವೂ ಕೂಡ ಕೆಲವು ಕಡೆಗಳಲ್ಲಿ ಇರವದುಂಟು. ಉದಾಹರಣೆಗೆ ಜಾತೇಷ್ಟಿ. (ವೈಶ್ವಾನರೇಷ್ಟಿ) ಇಲ್ಲಿ ಪುತ್ರ ಜನನ ನಿಮಿತ್ತವಾಗಿ ವೈಶ್ವಾನರೇಷ್ಟಿಯು ವಿಹಿತವಾಗಿದೆ. ಮುಂದೆ ಅರ್ಥವಾದದಲ್ಲಿ 'ಯಸ್ಮಿನ್ ಜಾತೇ ಏತಾಮಿಷ್ಟಿಂ ನಿರ್ವಪತಿ ಪೂತ ಏವ ಸಃ' ಎಂಬುದರ ಪ್ರಕಾರ ಪೂತತ್ವಾದಿ ಫಲಗಳು ಪುತ್ರಸಂಬಂಧಿಯೆಂದು ಕಂಡುಬರುತ್ತದೆ. ಇಷ್ಟಿಯಲ್ಲಿ ಕರ್ತೃ ತಂದೆಯಾಗಬೇಕಾಯಿತು. ಫಲಗಳು ಪುತ್ರನಿಗೆ : ಇದು ಹೇಗೆ ? ಕರ್ತೃತ್ವಫಲಭೋಕ್ತೃತ್ವಗಳು ಸಮಾನಾಧಿಕರಣವಾಗಿರಬೇಕೆಂಬ ಸಾಮಾನ್ಯನಿಯಮದ ಪ್ರಕಾರ ಇಲ್ಲಿ ಪೂತತ್ವಾದಿಫಲಗಳು ತಂದೆಗೆ ಸಂಬಂಧ ಪಡುತ್ತವೆಯೋ ? ಅಥವಾ ಪುತ್ರನಿಗೆ ಸಂಬಂಧಪಡುತ್ತವೆಯೋ ? ಎಂಬದಿಲ್ಲಿ ಸಂದೇಹ.

'ಅಗ್ನೀನಾದಧೀತ' ಎಂಬೀ ಆಧಾನವಿಧಿಯಲ್ಲಿ ಆತ್ಮನೇಪದಿಯ ಪ್ರತ್ಯಯವು ಶ್ರುತವಾಗಿರುವದರಿಂದ ಅಗ್ನಿಸಾಧ್ಯ ಫಲವು ಆಧಾನಕರ್ತೃವಿಗೆ ಸಂಬಂಧಪಡುವುದೆಂದು ಸಿದ್ಧವಾಗಿರುವಂತೆ ಇಲ್ಲಿಯೂ ಪೂತತ್ವಾದಿಫಲಗಳು ಇಷ್ಟಿಕರ್ತೃವಾದ ತಂದೆಗೇ ಹೊರತು ಪುತ್ರನಿಗಲ್ಲ-ಎಂದು ಪೂರ್ವಪಕ್ಷ.

ಯಸ್ಮಿನ್ ಜಾತೇ ಏತಾಮಿಷ್ಟಿಂ ನಿರ್ವಪತಿ ಪೂತ ಏವ ಸಃ' ಎಂಬೀ ಅರ್ಥವಾದದಲ್ಲಿನ ಯತ್ತತ್‌ಶಬ್ದಗಳು ಪುತ್ರನನ್ನು ಪರಾಮರ್ಶಮಾಡುವದರಿಂದಲೂ

ಯೋ ಜಾತಃ, ಸ ಪೂತಃ, (ಮಗನು ಹುಟ್ಟಿದಾಗ ಅಂದರೆ ಪುತ್ರಜನನನಿಮಿತ್ತ ವಾಗಿ ವೈಶ್ವಾನರೇಷ್ಟಿ ಮಾಡಬೇಕು. ಹುಟ್ಟಿದವನು ಯಾರೋ ಅವನು ಪೂತ ನಾಗುತ್ತಾನೆ.) ಪೂತ, ತೇಜಸ್ವೀ ಎಂಬೀ ಉಕ್ತಿಯಿಂದ ಪೂತತ್ವಾದಿಫಲಗಳು ಪುತ್ರ ಸಂಬದ್ಧವಾಗಿಯೇ ಹೇಳಲ್ಪಟ್ಟಿರುವದರಿಂದ ಪುತ್ರನಿಗೇ ಫಲವೆಂಬುದು ಸಿದ್ಧಾಂತ, ಪುತ್ರನಿಗೆ ಒಳ್ಳೆಯದಾದರೆ ಅದರಿಂದ ತಂದೆಗೆ ಸಂತೋಷ ಸಹಜ. ಈ ಸಂತೋಷವು ಗೌಣಪುರುಷಾರ್ಥವೆನಿಸಿದರೂ ಇಷ್ಟಿಯಲ್ಲಿ ಪ್ರವೃತ್ತಿಯನ್ನು ಹುಟ್ಟಿಸಲು ಸಾಕು. ಇತ್ಥಂಚ ಕರ್ತೃತ್ವಫಲಭೋಕ್ತೃತ್ವಗಳು ವ್ಯಧಿಕರಣವಾಗಿರುವದೂ ಉಂಟು ಎಂಬು ದಕ್ಕೆ ಈ ವೈಶ್ವಾನರೇಷ್ಟ್ಯಧಿಕರಣವು ಒಂದು ಉದಾಹರಣೆ, ಪುತ್ರಜನನನಿಮಿತ್ತ ವಾಗಿ ಮಾಡಬೇಕಾದ ಈ ವೈಶ್ವಾನರೇಷ್ಟಿಯು ನೈಮಿತ್ತಿಕವೂ ಹೌದು. ಫಲಶ್ರವಣ ದಿಂದಾಗಿ ಕಾಮ್ಯವೂ ಹೌದು. ಇಷ್ಟಿಯನ್ನು ನೆರವೇರಿಸದಿದ್ದಲ್ಲಿ ನೈಮಿತ್ತಿಕಾನನು ಷ್ಠಾನದಿಂದ ಪ್ರಾಪ್ತವಾಗುವ ಪ್ರತ್ಯವಾಯವು ತಂದೆಗೆ. ಅನುಷ್ಠಾನ ಮಾಡಿದರೆ ಇಷ್ಟಿಜನ್ಯಪೂತತ್ವಾದಿಫಲಗಳು ಪುತ್ರನಿಗೆಂದು ಇಲ್ಲಿನ ವ್ಯವಸ್ಥೆ.

ಪ್ರವೃತ್ತಿಪ್ರಯೋಜಕಫಲೇಚ್ಛಾಸಮಾನಾಧಿಕರಣಕವಾದ ಕರ್ತೃತ್ವವನ್ನು ಒಪ್ಪಬೇಕೆಂದು ಇಲ್ಲಿ ಕರ್ತೃತ್ವಲಕ್ಷಣವನ್ನು ಪರಿಷ್ಕಾರಮಾಡುತ್ತಾರೆ. ಫಲೇಚ್ಛಾ ಸಮಾನಾಧಿಕರಣಕವಾದ ಕರ್ತೃತ್ವವು ಎಲ್ಲ ಕಡೆಗಳಲ್ಲೂ ಅನ್ವಯಿಸುತ್ತದೆಂಬುದು ತಾತ್ಪರ್ಯ.

—ಸಂ

ಶ್ರೀಮಧ್ವೇಭ್ಯೋ ಭಗವದ್ಭ್ಯೋ ಬೋಧಾಯನಾಚಾರ್ಯೇಭ್ಯೋನಮಃ ।

## ಋತುಶಾಂತಿಕರ್ತೃತ್ವಾಧಿಕಾರಜಿಜ್ಞಾಸಾಧಿಕರಣ

ಬೋಧಾಯನಗೃಹ್ಯಶೇಷಸೂತ್ರದ ವಾಕ್ಯವೊಂದು ಹೀಗಿದೆ :— 'ಅಥ ಋತುಶಾಂತಿಂ ವ್ಯಾಖ್ಯಾಸ್ಯಾಮಃ । ತಿಥಿವಾರನಕ್ಷತ್ರಯೋಗಕರಣಲಗ್ನಾದಿ ದೋಷ ಶಾಂತ್ಯರ್ಥಂ ಚತುರ್ಥೇವಾ **ಪಂಚಮೇ**ಽಹ್ನಿ ವಾ ಶಾಂತಿಸ್ನಾನಂ ಪ್ರಕುರ್ವೀತ' । ಎಂದು. ಇಲ್ಲಿ ಕನ್ಯೆಯು ಮೊದಲನೇ ಸಲ ರಜಸ್ವಲೆಯಾದಾಗ ತಿಥ್ಯಾದಿಗಳು ದುಷ್ಟವಾಗಿರುವ ಸಂಭವವಿರುವದರಿಂದ ಆದೋಷ ಪರಿಹಾರಕ್ಕಾಗಿ **ಹುಡುಗಿಯು** ಐದನೇ ದಿನಶಾಂತಿಸ್ನಾನವನ್ನು ಮಾಡತಕ್ಕದು' ಎಂದು ಹೇಳಿ ಮುಂದೆ ಶಾಂತಿ ಸೂಕ್ತಪಠನ ಹಾಗೂ ಹೋಮಗಳು ವಿಹಿತವಾಗಿವೆ. ಸ್ತ್ರೀಗೆ ಪತಿಯೊಂದಡನೆ ಸಹಾಧಿಕಾರವೇ ಹೊರತು ಶಾಂತ್ಯಾದಿವೈದಿಕಕರ್ಮಗಳಲ್ಲಿ ಸ್ವತಂತ್ರವಾದ ಕರ್ತೃತ್ವವಿಲ್ಲದ ಕಾರಣ ಇಲ್ಲಿ ಕರ್ತೃಜಿಜ್ಞಾಸೆ ಸಹಜ, 'ದಂಪತ್ಯೋಃ ಸಹಾಧಿಕಾರಃ' ಎಂಬುದರ ಪ್ರಕಾರ ಈ ಋತುಶಾಂತಿಯಲ್ಲಿ ಪತಿಯೇ ಕರ್ತೃ

---

ಟಿಪ್ಪಣಿ

ಅಧಿಕರಣಂ.

ವಿಷಯೋ ವಿಶಯಶ್ಚೈವ ಪೂರ್ವಪಕ್ಷಸ್ತಥೋತ್ತರಃ ।
ಆಕ್ಷೇಪಸ್ಯ ಸಮಾಧಾನಂ ಶಾಸ್ತ್ರೇಽಧಿಕರಣಂ ವಿದುಃ ॥

ವಿಷಯ, ಸಂಶಯ, ಪೂರ್ವಪಕ್ಷ, ಸಿದ್ಧಾಂತ, ಆಕ್ಷೇಪಗಳಿಗೆ ಸಮಾಧಾನವೆಂಬೀ ಐದು ಅವಯವಗಳುಳ್ಳ ವಾಕ್ಯ ಸಂದರ್ಭಕ್ಕೆ ಅಧಿಕರಣ (ವಾಕ್ಯಾರ್ಥನಿರ್ಣಯಸ್ಥಾನ) ವೆಂದು ಹೆಸರು. ಗ್ರಂಥಾರಂಭದಲ್ಲಿ ಅನುಬಂಧಚತುಷ್ಟಯವನ್ನು ಹೇಳುವಂತೆ ಅಧಿಕರಣದ ಆರಂಭದಲ್ಲಿ ಶಾಸ್ತ್ರ, ಅಧ್ಯಾಯ, ಪಾದ, ಅಧಿಕರಣ ಸಂಗತಿಗಳನ್ನು ಸೂಚಿಸಬೇಕೆಂಬ ನಿಯಮವಿದೆ. 'ಪಂಚಮೇಽಹ್ನಿ ಶಾಂತಿಸ್ನಾನಂ ಪ್ರಕುರ್ವೀತ' ಎಂಬೀ ವಿಷಯವಾಕ್ಯವು 'ಶಾಸ್ತ್ರ'ವೇ ಆಗಿದ್ದು ಇದೇ ವಾಕ್ಯಕ್ಕೆ ಸಂಬಂಧಿಸಿದ ಅರ್ಥವು ಇಲ್ಲಿ ಜಿಜ್ಞಾಸಿತವಾದುದರಿಂದ 'ಶಾಸ್ತ್ರಸಂಗತಿ' ಕೂಡಿಬಂದಂತಾಯಿತು, ಈ ವಿಚಾರಕ್ಕೆ ಸಂಬಂಧಿಸಿದಂತೆ ಅಧ್ಯಾಯ ಹಾಗೂ ಪಾದಗಳೆಂಬ ಅವಾಂತರವಿಭಾಗದ ಗ್ರಂಥ ಸಂಧರ್ಭಗಳೇನೂ ಇಲ್ಲಿ ಇಲ್ಲದ್ದರಿಂದ ಅಧ್ಯಾಯಸಂಗತಿ, ಪಾದಸಂಗತಿಗಳು ಇಲ್ಲಿ ಕೂಡಿಬರುವದಿಲ್ಲ. 'ಪ್ರಸಂಗ'ವೇ ಇಲ್ಲಿ ಅಧಿಕರಣ ಸಂಗತಿ.

ವೆಂಬುದು ಅಕ್ಷಿಪ್ತವಾಗುತ್ತದೆ. ಇದನ್ನೇ ಅನುಸರಿಸಿ ಪ್ರಯೋಗಕಾರರೂ ಕೂಡ 'ಮಮ ಪತ್ನ್ಯಾಃ' ಪ್ರಥಮರಜೋದರ್ಶನಕಾಲೇ ತಿಥಿ.....ಲಗ್ನಾದಿ ದೋಷಶಾಂತ್ಯರ್ಥಂ' ಎಂಬೀ ಸಂಕಲ್ಪದ ಮೂಲಕ ಇಲ್ಲಿ ಪತಿಯೇ ಕರ್ತೃವೆಂಬುದನ್ನು ಸ್ಪಷ್ಟವಾಗಿ ತಿಳಿಯಪಡಿಸಿದ್ದಾರೆ. ಆದರೆ ಹುಡುಗಿಯು ವಿವಾಹದ ಅನಂತರದಲ್ಲಿ ಋತುಮತಿಯಾದರೆ ಆಗ ಪ್ರಯೋಗಕಾರರ ಈ ಮಾತು ಇಲ್ಲಿಗೆ ಸ್ವರಸವಾಗಿ ಅನ್ವಯಿಸುತ್ತದೆ. ಋತುಮತಿಯಾಗುವ ಪೂರ್ವದಲ್ಲಿ ಹೆಣ್ಣು ಮಕ್ಕಳ ಮದುವೆ ಮಾಡಬೇಕೆಂಬ ಶಾಸ್ತ್ರವಚನದ ಪ್ರಕಾರ ಉಕ್ತಕಾಲದಲ್ಲೇ ಹುಡುಗಿಗೆ ಮದುವೆಯಾಗಿದ್ದರೆ ಆಗ ಈ ಋತುಶಾಂತಿಯಲ್ಲಿ ಪತಿಯೇ ಕರ್ತೃ ವೆಂಬುದು ಕ್ರಮಪ್ರಾಪ್ತವೇ ಆಗುತ್ತದೆ. ಕಾರಣಾಂತರದಿಂದ ಉಕ್ತಕಾಲದಲ್ಲಿ ಮಗಳ ಮದುವೆ ಮಾಡುವದು ತಂದೆ–ತಾಯಿಗಳಿಗೆ ಸಾಧ್ಯವಾಗಲಿಲ್ಲ. ಮದುವೆಗೆ ಮೊದಲೇ ಅವಳು ಋತುಮತಿಯಾಗಿಬಿಟ್ಟಳು. ಆಗ 'ಪಂಚ-ಮೇsಹ್ನಿ ಶಾಂತಿ ಸ್ನಾನಂ ಪ್ರಕುರ್ವೀತ' ಎಂಬೀ ವಿಧಿಯ ಪ್ರಕಾರ ಹುಡುಗಿಗೆ ಶಾಂತಿಸ್ನಾನ ಹಾಗೂ ಶಾಂತಿಸೂಕ್ತಪಠನ,ಶಾಂತಿಹೋಮಗಳುಆಗಬೇಕಾಗಿ ಬಂತು, ಇದೀಗ ಇಲ್ಲಿ ಜಿಜ್ಞಾಸೆ : 'ಮಮ ಪತ್ನ್ಯಾಃ'ಎಂದು ಪ್ರಯೋಗದಲ್ಲಿ ಹೇಳಿರುವದರಿಂದ 'ಪಂಚಮೇsಹ್ನಿ' ಎಂಬೀ ಗೃಹ್ಯಕಾರರಮಾತನ್ನು ಮೀರಿ ಮದುವೆಯ ನಂತರ ಪತಿಯು ಮೂಲಕವೇ ಈ ಋತ ಶಾಂತಿಯನ್ನು ನೆರವೇರಿಸುವದೇ ? ಅಥವಾ "ಪಂಚ-ಮೇsಹ್ನಿ" ಎಂಬ ಗೃಹ್ಯಕಾರರ

---

ಟಿಪ್ಪಣಿ

ಇಲ್ಲಿ ವಿಷಯ, ವಿಶಯಗಳನ್ನು ಇನ್ನೊಂದು ರೀತಿಯಲ್ಲೂ ಆಯ್ಕೆ ಮಾಡ ಬಹುದು. ಇಡಿಯ ವಾಕ್ಯದ ಸಮಗ್ರಅರ್ಥವೂ ಜಿಜ್ಞಾಸಿತವಾಗಬೇಕೆಂದೇನೂ ಇಲ್ಲ. ವಾಕ್ಯಾಂಶವಾದ ಶಬ್ದದ ಅರ್ಥವು ಜಿಜ್ಞಾಸಿತವಾದರೂ ಸಾಕು. 'ಪಂಚ-ಮೇsಹ್ನಿ ಶಾಂತಿಸ್ನಾನಂ ಪ್ರಕುರ್ವೀತ' ಎಂಬಲ್ಲಿ ಸಂಕಲ್ಪಾದಿಯಾಜಮಾನ್ಯಕರ್ಮ ದಲ್ಲಿ ಕರ್ತೃ ಯಾರೆಂಬ ನಿರ್ದೇಶವಿಲ್ಲದ್ದರಿಂದ ಇಲ್ಲಿ ಕರ್ತೃಜಿಜ್ಞಾಸೆಗೆ ಅವಕಾಶ ವಾಯಿತು, ಇತ್ಥಂಚ ಶಾಸ್ತ್ರಸಂಗತಿ, ಅಧಿಕರಣಸಂಗತಿಗಳು ಸರಿಹೋದಂತಾ ಯಿತು. — ಸಂ.

o o o o

ಈ 'ಜಿಜ್ಞಾಸಾಧಿಕರಣ'ದಿಂದಾರಂಭಿಸಿ ಮುಂದಿನ ವಿವರಣೆಗಳೆಲ್ಲವೂ ನನ್ನ ವೈಯಕ್ತಿಕವಾದುದರಿಂದ ಇವುಗಳಲ್ಲಿನ ಎಲ್ಲ ಬಗೆಯ ಅನೌಚಿತ್ಯಗಳಿಗೂ ನಾನು ಮಾತ್ರ ಹೊಣೆ, ಕಾರಣ ವಿದ್ವಾಂಸರು ತಮ್ಮ ಪ್ರತಿಕ್ರಿಯೆಗಳಲ್ಲಿ ಇಲ್ಲಿನ ದೋಷ ಗಳಿಗೆ ನನ್ನನ್ನು ಮಾತ್ರ ಗುರಿಯಿಟ್ಟು ಎತ್ತಿ ಹೇಳಬೇಕು. ಔಚಿತ್ಯಗಳು, ಸಾಮಂಜಸ್ಯ ಗಳೇನಾದರೂ ಇವುಗಳಲ್ಲಿ ಕಂಡುಬಂದಲ್ಲಿ ಅವು ಮಾತ್ರ 'ಔಚಿತ್ಯದೃಷ್ಟಿ'ಯವರೆಲ್ಲ ರಿಗೂ ಅನ್ವಯಿಸುತ್ತವೆ. — ಸಂ. ಸಂ—ಸಂಕಲನಕಾರ

ವಚನದ ಪ್ರಕಾರ ಮೊದಲ ರಜೋದರ್ಶನದ ಐದನೇ ದಿನವೇ ಹುಡುಗಿಯ ತಂದೆಯೇ ಕರ್ತೃವಾಗಿದ್ದುಕೊಂಡು ಈ ಶಾಂತಿಯನ್ನು ನೆರವೇರಿಸುವದೇ ? ಎಂಬುದಿಲ್ಲಿ ಸಂದೇಹದ ಶರೀರ.

## ಪೂರ್ವಪಕ್ಷ

ಋತುಶಾಂತಿಯ ಸಂಕಲ್ಪದಲ್ಲಿ "ಮಮ ಪತ್ನ್ಯಾಃ..." ಎಂದು ಸ್ಪಷ್ಟವಾಗಿ ಉಲ್ಲೇಖವಿರುವದರಿಂದಲೂ, ಪ್ರಯೋಗ ಗ್ರಂಥಗಳಲ್ಲಿ ಗರ್ಭಾಧಾನಹೋಮದ ಆನುಪೂರ್ವಿಯ ಅವ್ಯವಹಿತಪೂರ್ವದ ಆನುಪೂರ್ವಿಯಲ್ಲಿ ಋತುಶಾಂತಿಪ್ರಯೋಗವು ಕಂಡುಬರುವದರಿಂದಲೂ ಕೂಡ ಇಲ್ಲಿ ಪತಿಯೇ ಕರ್ತೃವಾಗಬೇಕೆಂಬುದು ಶಾಸ್ತ್ರಕಾರರ ಅಭಿಮತ. ಕಾರಣ ವಿವಾಹಕ್ಕೆ ಪೂರ್ವದಲ್ಲೇ ಕನ್ಯೆಯು ರಜಸ್ವಲೆಯಾದಾಗ ಕರ್ತೃವು ಉಪಸ್ಥಿತವಾಗಿಲ್ಲದ ಕಾರಣ ಶಾಂತಿಗೇ ಉತ್ಕರ್ಷಣ ಹೇಳಬೇಕೇ ಹೊರತು ತಂದೆಯು ಋತುಶಾಂತಿಯಲ್ಲಿ ಕರ್ತೃವಾಗಲು ಅವಕಾಶವಿಲ್ಲ. "ಪ್ರಥಮರಜೋದರ್ಶನದ ಐದನೇ ದಿನ" ವೆಂಬಲ್ಲಿನ ಪ್ರಾಥಮ್ಯವೆಂಬ ಅರ್ಥಕ್ಕೆ ಲೋಪ ಬಂದರೂ "ರಜೋದರ್ಶನದ ಐದನೇ ದಿನ" ಎಂಬ ಅರ್ಥವು ಮುಂದೆ ಮದುವೆಯ ನಂತರದ ಋತುಶಾಂತಿಯ ಅನುಷ್ಠಾನದಲ್ಲಿ ಸಂಗೃಹೀತವಾಗುವದರಿಂದ "ಪಂಚಮೇಽಹ್ನಿ" ಎಂಬ ಅರ್ಥಕ್ಕೆ ಲೋಪವೇನೂ ಇಲ್ಲ. ಕಾರಣ ಮದುವೆಗೆ ಮುಂಚೆ ಋತುಮತಿಯಾದರೂ, ಋತುಶಾಂತಿಯ ಅನುಷ್ಠಾನವು ಮಾತ್ರ ಮದುವೆಯ ನಂತರವೇ ಪ್ರಯೋಗಗಳಲ್ಲಿ ಉಕ್ತವಾಗಿರುವದರಿಂದ ಇಲ್ಲಿ ಪತಿಯೇ ಕರ್ತೃವೆಂಬುದು ಪೂರ್ವಪಕ್ಷದ ಸಾರಾಂಶ.

## ಸಿದ್ಧಾಂತ :—

ರಜೋದರ್ಶನಕ್ಕಿಂತ ಮುಂಚಿತವಾಗಿಯೇ ಹೆಣ್ಣುಮಕ್ಕಳಿಗೆ ಮದುವೆ ಮಾಡಬೇಕೆಂಬುದು ಶಾಸ್ತ್ರದ ಕಟ್ಟಳೆಯಾದುದರಿಂದ ಮದುವೆಯ ನಂತರವೇ ಅವರಿಗೆ ರಜೋದರ್ಶನವಾಗುವದನ್ನು ಗೃಹೀತವಾಗಿಟ್ಟುಕೊಂಡು ಪ್ರಯೋಗಕಾರರು ಋತುಶಾಂತಿಯ ಸಂಕಲ್ಪದಲ್ಲಿ "ಮಮ ಪತ್ನ್ಯಾಃ" ಎಂದು ಪತಿಯ ಯಾಜಮಾನ್ಯವನ್ನು ಸೂಚಿಸಿದ್ದಾರೆಯೇ ಹೊರತು ಋತುಶಾಂತಿಯಲ್ಲಿ ತಂದೆಗೆ ಕರ್ತೃತ್ವಾಧಿಕಾರವಿಲ್ಲವೆಂಬ ಅಭಿಪ್ರಾಯದಿಂದ ಹಾಗೆ ಉಲ್ಲೇಖಿಸಿದ್ದಲ್ಲ. ಗೃಹ್ಯಸೂತ್ರಕಾರರು ಇಲ್ಲಿ ಪ್ರಥಮ ರಜೋದರ್ಶನದ ಐದನೇ ದಿನ ಈ ಶಾಂತಿಯನ್ನು ಮಾಡಬೇಕೆಂದು ವಿಧಿಸಿದ್ದಾರೆಯೇ ಹೊರತು ಮದುವೆಯ ನಂತರವೆಂದಾಗಲಿ, ಇದರಲ್ಲಿ ಪತಿಯೇ ಕರ್ತೃವೆಂದಾಗಲೀ ಹೇಳಿಲ್ಲ. ಋತುಮತಿಯಾಗಲಿ, ಆಗದೇ ಇರಲಿ ಮದುವೆ ಮಾಡಿಕೊಡುವವರೆಗೂ ಹೆಣ್ಣುಮಕ್ಕಳ ಸರ್ವತೋಮುಖವಾದ ಶ್ರೇಯಸ್ಸನ್ನು ಬಯಸುವದು

ಮಾತ್ರವಲ್ಲ; ಸರ್ವಪ್ರಯತ್ನದಿಂದಲೂ ಅವರ ಶ್ರೇಯಸ್ಸಾಧನೆಯ ದಿಶೆಯಲ್ಲಿ ಕ್ರಿಯಾಶೀಲರಾಗುವದು ತಂದೆ-ತಾಯಿಗಳ ಕರ್ತವ್ಯವೇ ಆಗಿದೆ. ಪ್ರಥಮರಜೋದರ್ಶನದ ಸಂದರ್ಭದಲ್ಲಿ ದುಷ್ಟಕಾಲದ ನಿಮಿತ್ತವಾಗಿ ಮಗಳಿಗೆ ಅನಿಷ್ಟವೇನಾದರೂ ಘಟಿಸುವಂತಿದ್ದರೆ ಈ ಅನಿಷ್ಟಪರಿಹಾರಕ್ಕಾಗಿ ಐದನೇ ದಿನವೇ ತಂದೆಯು ಈ ಶಾಂತಿಯನ್ನು ನೆರವೇರಿಸುವದುಚಿತ. "ಪ್ರಥಮರಜೋದರ್ಶನದ ಐದನೇ ದಿನ" ಎಂದು ಶ್ರುತವಾದ ಕಾಲವೂ ಕೂಡ ಸಂಗೃಹೀತವಾದಂತಾಗುವದರಿಂದ ಈ ಶಾಂತಿಯ ಉತ್ಕರ್ಷಣಕ್ಕೆ ಅವಕಾಶವಿಲ್ಲ. ಕರ್ತೃವು ಶ್ರುತವಾಗಿಲ್ಲದ ಸ್ಥಳದಲ್ಲಿ ಔಚಿತ್ಯದೃಷ್ಟಿಯಿಂದ ಪರಿಶೀಲಿಸಿ "ಅನುಕ್ತಮನ್ಯತೋ ಗ್ರಾಹ್ಯಂ" ಎಂಬ ಶಾಸ್ತ್ರದ ಪ್ರಕಾರ ದಶಾಸಂಧಿಶಾಂತಿ, ಗ್ರಹಣಪ್ರಯುಕ್ತಶಾಂತಿ ಮೊದಲಾದ ಸ್ಥಳಗಳಲ್ಲಿ ಅವಿವಾಹಿತ ಕನ್ಯೆಯ ಶ್ರೇಯಸ್ಸಿಗಾಗಿ ನೆರವೇರಿಸುವ ಅನುಷ್ಠಾನಗಳಲ್ಲಿ ತಂದೆಯೇ ಕರ್ತೃವೆಂಬುದು ಸ್ಪಷ್ಟವಿದೆ. ಋತುಶಾಂತಿಯೂ ಕೂಡ ಅವುಗಳಂತೆಯೇ ದೋಷದೂರೀಕರಣಕ್ಕಾಗಿ ಮಾಡುವ ಒಂದು ಅನುಷ್ಠಾನ. ಕಾರಣ, ಮದುವೆಗೆ ಮೊದಲು ಮಗಳು ಋತುಮತಿಯಾದರೆ "ಐದನೇ ದಿನ" ವಿಹಿತವಾದ ಈ ಶಾಂತಿಯಲ್ಲಿ ತಂದೆಯೇ ಕರ್ತೃವಾಗಲಡ್ಡಿಯಿಲ್ಲ, ಪ್ರಥಮರಜೋದರ್ಶನದ ಐದನೇ ದಿನ ಈ ಶಾಂತಿ ಮಾಡಬೇಕೆಂಬುದೇ ಇಲ್ಲಿ ಶಾಸ್ತ್ರತಾತ್ಪರ್ಯವೇ ಹೊರತು ವಿವಾಹದ ಅನಂತರವೇ ಮಾಡಬೇಕೆಂಬುದಲ್ಲ. ಇತ್ಥಂ ಚ ವಿವಾಹಕ್ಕೆ ಮೊದಲು ಹೆಣ್ಣುಮಕ್ಕಳು ಋತುಮತಿಯರಾದರೆ ಆಗ ಶುದ್ಧಿಸ್ನಾನಾನಂತರ ಐದನೇ ದಿನ ತಂದೆಯೇ ಕರ್ತೃವಾಗಿ ಈ ಶಾಂತಿಯನ್ನು ನೆರವೇರಿಸುವದೆಂಬುದೀಗ ಸಿದ್ಧಾಂತ.

**ಆಕ್ಷೇಪ :**

ಪ್ರಯೋಗ ಗ್ರಂಥಗಳಲ್ಲಿ ಗರ್ಭಾಧಾನಹೋಮಪ್ರಯೋಗದ ಅವ್ಯವಹಿತ ಪೂರ್ವದಲ್ಲಿ ಋತುಶಾಂತಿಯು ಉಕ್ತವಾಗಿರುವರಿಂದ ಇದು ವಿವಾಹದ ಅನಂತರ ಪತಿಯ ಕರ್ತೃತ್ವದಲ್ಲೇ ನೆರವೇರಬೇಕು. ಅಲ್ಲದೆ ಕರ್ಣವೇಧಾಂತವಾದ ಸ್ತ್ರೀ ಸಂಸ್ಕಾರಗಳಲ್ಲಿ ಮಾತ್ರ ತಂದೆಗೆ ಅಧಿಕಾರವೆಂಬುದು ಶಾಸ್ತ್ರತಾತ್ಪರ್ಯವಿರುವಾಗ ಋತುಶಾಂತಿಯಲ್ಲಿ ತಂದೆಗೆ ಕರ್ತೃತ್ವಾಧಿಕಾರವೆಲ್ಲಿಯದು ? ಕಾರಣ ಕಾರಣಾಂತರದಿಂದ ಉಕ್ತಕಾಲದಲ್ಲಿ ವಿವಾಹವಾಗದೇ ಇದ್ದಾಗ ವಿವಾಹಕ್ಕೆ ಮೊದಲು ಹೆಣ್ಣುಮಕ್ಕಳು ಋತುಮತಿಯರಾದರೂ ಋತುಶಾಂತಿ ಮಾತ್ರ **"ವಿವಾಹದ ಅನಂತರದಲ್ಲಿ ಪ್ರಥಮರಜೋದರ್ಶನದ ಐದನೇ ದಿನ"** ಎಂಬುದನ್ನು ಸಂಗ್ರಹಿಸಲು ಸಾಧ್ಯವಿರುವದರಿಂದ ಪತಿಯೇ ಕರ್ತೃವಾಗಿದ್ದುಕೊಂಡು ಈ ಶಾಂತಿಯನ್ನು ನೆರವೇರಿಸಬೇಕೇ ಹೊರತು ಮದುವೆಗೆ ಮೊದಲು ತಂದೆಯ ಕರ್ತೃತ್ವದಲ್ಲಿ ನೆರವೇರಿಸಬಹುದೆಂದು ಹೇಳಲು ಪ್ರಮಾಣಸಾಲದು.

ದಶಾಸಂಧಿ, ಗ್ರಹಣ ಇತ್ಯಾದಿಸ್ಥಳಗಳಲ್ಲಾದರೋ ಆಯಾ ನಿಮಿತ್ತಗಳನ್ನನು-ಸರಿಸಿ ವಿವಾಹ ಪೂರ್ವದಲ್ಲಿ ಈ ನಿಮಿತ್ತಗಳು ಪ್ರಾಪ್ತವಾದಾಗ ಅವುಗಳಿಗೆ ಹೇಳಿದ ನೈಮಿತ್ತಿಕಗಳನ್ನು ತಂದೆಯು ನೆರವೇರಿಸುವದು ಶಾಸ್ತ್ರಸಮ್ಮತವೂ ಆಚಾರ ಪ್ರಾಪ್ತವೂ ಆಗಿದೆ. ಋತುಶಾಂತಿಯು ಹಾಗೆ ಆಚಾರಪ್ರಾಪ್ತವೂ ಅಲ್ಲ. ಒಟ್ಟಿನಲ್ಲಿ ಈ ಎಲ್ಲ ಕಾರಣಗಳಿಂದಾಗಿ ವಿವಾಹಪೂರ್ವದ ಋತುಶಾಂತಿಯೆಂಬುದೊಂದು ಇಂದಿನ ಪಂಡಿತಂಮನ್ಯರು ಸೃಷ್ಟಿಸಿದ ಮೊಲದ ಕೊಂಬೇ ಹೊರತು ಅವರ ವಾದದಲ್ಲಿ ಇನ್ನೇನೂ ಸಾರಾಂಶವಿಲ್ಲ"ವೆಂಬುದಿಲ್ಲಿ ಆಕ್ಷೇಪ.

**ಸಮಾಧಾನ :**

ಬಾಲಾವಿವಾಹವು ಬಳಕೆಯಲ್ಲಿದ್ದಾಗ ರಚಿತವಾದ ಪ್ರಯೋಗಗ್ರಂಥಗಳಲ್ಲಿ ಔಚಿತ್ಯದೃಷ್ಟಿಯಿಂದ ಋತುಶಾಂತಿಯನ್ನು ಗರ್ಭಾಧಾನಹೋಮದ ಅವ್ಯವಹಿತ ಪೂರ್ವದಲ್ಲಿ ಅಕ್ಷರೀಕರಿಸಿದ್ದಾರೆಯೇ ಹೊರತು ವಿವಾಹಪೂರ್ವದಲ್ಲೇ ಕನ್ಯೆಯು ಋತುಮತಿಯಾದಾಗಲೂ ಇದೇ ಕ್ರಮವನ್ನು ಪಾಲಿಸಬೇಕೆಂಬುದಕ್ಕೆ ಶಾಸ್ತ್ರಾಧಾರ ವಿಲ್ಲ, ಗೃಹ್ಯಸೂತ್ರಕಾರರ ಪ್ರಕಾರ ಋತುಶಾಂತಿಗರ್ಭಾಧಾನಹೋಮಗಳಿಗೆ ಪರಸ್ಪರಸಂಬಂಧವೇನೂ ಇಲ್ಲ. ಕರ್ಣವೇಧನದ ನಂತರ ಕನ್ಯೆಗೆ ವಿವಾಹವೇ ಮುಂದಿನ ಸಂಸ್ಕಾರವಾದುದರಿಂದ ವಿವಾಹದಲ್ಲಿ ಪತಿಯೇ ಕರ್ತೃವೆನಿಸುವದರಿಂದ ತಂದೆಗೆ ಅಲ್ಲಿಯವರೆಗಿನ ಸಂಸ್ಕಾರಗಳಲ್ಲಿ ಮಾತ್ರ ಅಧಿಕಾರವೆಂಬುದು "ಸಂಸ್ಕಾರ" ಗಳಿಗೆ ಮಾತ್ರ ಅನ್ವಯಿಸುತ್ತದೆಯೇ ಹೊರತು ಶಾಂತ್ಯಾದಿನೈಮಿತ್ತಿಕಕರ್ಮಗಳ ಬಗೆಗೆ ಅನ್ವಯಿಸುವದಿಲ್ಲ. (ಮದುವೆಯಲ್ಲೂ ಸಹ ಧಾರೆಯವರೆಗೆ ತಂದೆಗೂ ಕರ್ತೃತ್ವವಿರುವ ವಿಚಾರ ಬೇರೆ,) ಕಾರಣ ವಿವಾಹಕ್ಕೆ ಮೊದಲು ಕನ್ಯೆಯು ಋತು ಮತಿಯಾದಾಗ ತಂದೆಯೇ ಈ ಋತುಶಾಂತಿಯನ್ನು ನೆರವೇರಿಸಬಹುದು. "ಪ್ರಥಮ ರಜೋದರ್ಶನದ ಐದನೇ ದಿನ" ಎಂಬ ವಿಧಿಗೂ ಇಲ್ಲಿ ಸಾರ್ಥಕ್ಯ ಬಂದಂತಾಗುತ್ತದೆ. "ಪ್ರಥಮ ರಜೋದರ್ಶನದ ದುಷ್ಟಕಾಲ, ವೆಂಬ ನಿಮಿತ್ತವು ಪ್ರಾಪ್ತವೂ ಜ್ಞಾತವೂ ಆದಾಗ ಇದಕ್ಕೆ ಹೇಳಿದ ನೈಮಿತ್ತಿಕಕರ್ಮವಾದ ಋತುಶಾಂತಿಯನ್ನು ಸಕಾಲದಲ್ಲಿ ಮಾಡದೇ ಗರ್ಭಾಧಾನಹೋಮದ ಅವ್ಯವಹಿತಪೂರ್ವದಲ್ಲಿ ಮಾಡತಕ್ಕದ್ದೆಂದು ಉತ್ಕರ್ಷಣ ಮಾಡಿದಾಗ ಅಧಿಕಾರಿಯಿಂದಲ್ಲೂ ಕೂಡ ಅನುಷ್ಠಾನ ಮಾಡದೇ ಇದ್ದುದ ರಿಂದ ತಂದೆಗೆ ಪ್ರತ್ಯವಾಯ ತಟ್ಟುತ್ತದೆ. ಕನ್ಯೆಯೂ ಕೂಡ ಈ ದೋಷಗಳ ಹೊರೆಯನ್ನು ಹೊತ್ತು ಕುಳಿತಿರುವದಕ್ಕಿಂತಲೂ ಶಾಂತಿಯ ಮೂಲಕ ಈ ಭಾರ ವನ್ನು ಕಳೆಯುವದೂ ಕೂಡ ತಂದೆಯ ಕರ್ತವ್ಯವೆನಿಸುತ್ತದೆ. ವೈಧವ್ಯ, ಬಂಜೆತನ, ಮೊದಲಾದ ದೋಷಗಳು ಮದುವೆಯ ನಂತರವೇ ಫಲೋಪಧಾಯಕಗಳಾದುದ ರಿಂದಲೂ ಇವು ಪತಿಗೇ ಸಂಬಂಧಪಡುವ ದೋಷಗಳಾದುದರಿಂದಲೂ ಕೂಡ

ಆ ದೋಷದೂರೀಕರಣಕ್ಕಾಗಿ ಮಾಡಬೇಕಾದ ಋತುಶಾಂತಿಯಲ್ಲಿ ಪತಿಯೇ ಕರ್ತೃವಾಗಬೇಕೆಂದೂ ವಾದಿಸುವಂತಿಲ್ಲ. ಯಾಕಂದರೆ ಫಲೋಪಧಾಯಕತ್ವರೂಪ ವಾದ ಯೋಗ್ಯತೆಯು ಈ ದೋಷಗಳಿಗೆ ಮದುವೆಯ ನಂತರವೇ ಪ್ರಾಪ್ತವಾಗುವ ದಾದರೂ ಸ್ವರೂಪಯೋಗ್ಯತೆಯೊಂದಿಗೆ ಈ ದೋಷಗಳು ಪ್ರಥಮ ರಜೋದರ್ಶನದ ಸಮಯದಲ್ಲೇ ಕನ್ಯೆಯ ದೇಹಾತ್ಮಗಳನ್ನು ಆವರಿಸಿ ಕುಳಿತಿರುತ್ತವೆ. ಕಾರಣ ಪ್ರಥಮ ರಜೋದರ್ಶನದ ಐದನೇ ದಿನವೇ ಶಾಂತಿಯ ಅನುಷ್ಠಾನದಿಂದ ಈ ದೋಷಗಳನ್ನು ಕಳೆಯಬೇಕಾದುದು ಅವಶ್ಯ. ದೋಷವು ಪ್ರಾಪ್ತವಾಗಿ ಹಾಗೂ ಜ್ಞಾತವಾಗಿ ಹತ್ತಾರು ವರ್ಷಗಳ ನಂತರ ಅದರ ಪರಿಹಾರಕ್ಕಾಗಿ ಶಾಂತಿ ಮಾಡುವದು ಅಷ್ಟೊಂದು ಸಮಂಜಸವೆನಿಸುವದಿಲ್ಲ. ನಿಮಿತ್ತನೈಮಿತ್ತಿಕಗಳ ಸ್ಥಳದಲ್ಲಿ ಶಾಸ್ತ್ರವು ಎಷ್ಟರ ಮಟ್ಟಿಗೆ ಕಾಲದ ಅಂತರವನ್ನು ಒಪ್ಪುತ್ತದೆಯೋ ಅಷ್ಟು ವಿಳಂಬ ಮಾತ್ರ ಸಹ್ಯವೇ ಹೊರತು ಹತ್ತಾರು ವರ್ಷಗಳ ವಿಳಂಬವೂ ಸಹ್ಯವೆನ್ನಲಾಗದು, ದಶಾಸಂಧಿ, ಗ್ರಹಣ ಗಳು ಪ್ರಾಪ್ತವಾದಾಗ ನೆರವೇರಿಸುವ ಶಾಂತಿಗಳನ್ನು ಇಲ್ಲಿ ನೆನಪುಮಾಡಿಕೊಳ್ಳ ಬಹುದು. ಅನಿಷ್ಟಗಳು (ದೋಷಗಳು) ಪ್ರಾಪ್ತವಾಗಿ ಜ್ಞಾತವಾದಾಗ ಸಕಾಲದಲ್ಲಿ ಮಾಡುವ ಶಾಂತಿಯೇ ಹೆಚ್ಚು ವೀರ್ಯವತ್ತರವೇ ಹೊರತು ಹತ್ತಾರು ವರ್ಷಗಳು ಕಳೆದ ನಂತರ ಮಾಡುವ ಶಾಂತಿಯು ಅಷ್ಟೊಂದು ವೀರ್ಯವತ್ತರವಾಗಲಾರದು.

ಪ್ರಥಮರಜೋದರ್ಶನದಲ್ಲಿ ದುಷ್ಟಕಾಲದ ನಿಮಿತ್ತ ಪ್ರಾಪ್ತವಾಗುವ ದೋಷಗಳೆಲ್ಲವೂ ಪತಿಗೂ ಪತಿಕುಲಕ್ಕೂ ಸಂಬಂಧ ಪಡುತ್ತವೆಯೇ ಹೊರತು ಕನ್ಯೆಯ ತಂದೆ-ತಾಯಿಗಳಿಗೂ, ಪಿತೃಕುಲಕ್ಕೂ ಸುತರಾಂ ಸಂಬಂಧ ಪಡುವದಿಲ್ಲೆಂಬ ಪೂರ್ವಪಕ್ಷಿಗಳ ವಾದದಲ್ಲಿ ಹುರುಳಿಲ್ಲ. ಈ ದೋಷಗಳು ವಸ್ತುತಃ ಮುಖ್ಯವಾಗಿ ಸಂಬಂಧ ಪಡುವದು ಕನ್ಯೆಗೆ. ಅವಳ ಮೂಲಕ ಪತಿಗೂ ಪತಿಕುಲಕ್ಕೂ ಸಂಬಂಧ ಪಡುತ್ತವೆಂದು ಹೇಳಬಹುದು. ಪತಿಪತ್ನಿಯರಲ್ಲಿ ಅನ್ಯೋನ್ಯಾಲಂಬನರೂಪವಾದ ಪರಸ್ಪರಸಂಬಂಧವಿರುವದರಿಂದ ಒಬ್ಬರ ವಿಪತ್ತು ಇನ್ನೊಬ್ಬರಿಗೂ ಅನ್ವಯಿಸುತ್ತದೆ ಅಷ್ಟೇ. ವೈಧವ್ಯ, ಸಂತತಿಹೀನತೆ, ಮಹಾರೋಗ ಮುಂತಾದ ವಿಪತ್ತುಗಳು ಪ್ರಾಪ್ತ ವಾದರೆ ಆ ದುಃಖ, ಆ ಕ್ಲೇಶ, ಆ ಯಾತನೆಗಳನ್ನು ಅನುಭವಿಸಿ ನಿಸ್ತರಿಸುವಳು ಅವಳೇ ಅಷ್ಟೇ. ಮಗಳಿಗೆ ವೈಧವ್ಯಾದಿಗಳು ಪ್ರಾಪ್ತವಾದಾಗ ಅವಳ ಪತಿಕುಲಕ್ಕೆ ಎಷ್ಟು ನೋವೋ, ಅವಳ ತಂದೆ-ತಾಯಿಗಳಿಗೂ ಅಷ್ಟೇ ನೋವು ಸಹಜ. ಕಾರಣ ಪ್ರಥಮ ರಜೋದರ್ಶನಕಾಲದ ಸಂಭಾವ್ಯದೋಷಗಳು ಪತಿಕುಲಕ್ಕೆ ಎಷ್ಟರಮಟ್ಟಿಗೆ ಸಂಬಂಧ ಪಡುತ್ತವೋ ತಂದೆ-ತಾಯಿಗಳಿಗೂ ಅಷ್ಟೇ ಸಂಬಂಧ ಪಡುತ್ತವೆ. "ಅರ್ಥೋಹಿ ಕನ್ಯಾ ಪರಕೀಯ ಏವ" ಎಂಬುದಕ್ಕೆ ಮದುವೆಮಾಡಿಕೊಟ್ಟ ಮೇಲೆ ತಂದೆತಾಯಿಗಳಿಗೆ ಅವಳ ವಿಷಯದಲ್ಲಿ ಜವಾಬ್ದಾರಿಯು ಕಡಿಮೆಯಾಯಿತೆಂದಿಷ್ಟೇ ಅರ್ಥ. ಸಂಬಂಧವು ಮಾತ್ರ ಪರಸ್ಪರರ ದೇಹಾಂತದವರೆಗೂ ಇದ್ದೇ ಇರುತ್ತ

ವೆಂಬ ದೃಷ್ಟಿಯಿಂದಲೇ ಪರಸ್ಪರರ ನಿಮಿತ್ತಕವಾದ ಆಶೌಚವು ಪರಸ್ಪರರಿಗೆ ಅಸ್ಪಿಷ್ಟ ವಿದ್ದೇ ಇದೆಯೆಂದು ಶಾಸ್ತ್ರಗಳು ತಿಳಿಸುತ್ತವೆ.

ಪ್ರಥಮರಜೋದರ್ಶನಕಾಲದಲ್ಲಿ ಸಂಭವಿಸುವ ದೋಷಗಳು ಕನ್ಯೆಗೇ ಮುಖ್ಯವಾಗಿ ಸಂಬಂಧಪಡುತ್ತವೆಂಬುದನ್ನು ಶಾಸ್ತ್ರಗಳು ತಿಳಿಸುತ್ತವೆ. ಇಲ್ಲಿ ದೋಷಾಶ್ರಯವನ್ನು ಸ್ತ್ರೀಲಿಂಗದಲ್ಲಿ ನಿರ್ದೇಶಿಸಿದ್ದಾರೆಯೇ ಹೊರತು (ಪತಿ, ಪತಿ ಕುಲವೆಂಬ ಅರ್ಥದಲ್ಲಿ) ಪುಲ್ಲಿಂಗ, ನಪುಂಸಕಲಿಂಗದಲ್ಲಿ ನಿರ್ದೇಶಿಸಿಲ್ಲ. ಕಾರಣ ಇಲ್ಲಿ ಧರ್ಮಿಗ್ರಾಹಕ ಪ್ರಮಾಣದಿಂದಾಗಿ ಈ ದೋಷಗಳು ಮುಖ್ಯವಾಗಿ ಕನ್ಯೆಗೇ ಸಂಬಂಧ ಪಡುತ್ತವೆಂಬುದು ಶಾಸ್ತ್ರತಾತ್ಪರ್ಯ. ಪ್ರಯೋಗಕಾರರೂ ಕೂಡ ಸಂಕಲ್ಪದಲ್ಲಿ "ಮಮ ಭಾರ್ಯಾಯಾಃ" ಎಂದು ಸ್ತ್ರೀಯನ್ನು ಮಾತ್ರ ದೋಷಸಂಬಂಧಿಯಾಗಿ ನಿರ್ದೇಶಿಸಿದ್ದಾರೆಯೇ ಹೊರತು "ಆವಯೋಃ" ಎಂದಾಗಲೀ, "ಮಮ, ಭಾರ್ಯಾ ಯಾಶ್ಚ" ಎಂದಾಗಲೀ ನಿರ್ದೇಶ ಮಾಡಿಲ್ಲ. ಅದೂ ಅಲ್ಲದೇ ಇಲ್ಲಿ ಮಂತ್ರಪೂತ ಕಲ ಶೋಕದ ಪ್ರೋಕ್ಷಣಸ್ನಾನಗಳು ಸ್ತ್ರೀಗೆ ಮಾತ್ರವೆಂಬುದು ಭೋಧಾಯನಾಚಾರ್ಯರ ಅಭಿಮತ. ಪತಿಗೂ ಸಂಬಂಧಪಡುವದೆಂಬ ಆಶಯವಿದ್ದಿದ್ದರೆ ದಂಪತಿಗಳಿಗೆ ಪ್ರೋಕ್ಷಣ, ಸ್ನಾನಗಳನ್ನು ಹೇಳುತ್ತಿದ್ದರು. (ಇಲ್ಲಿ ಸೂತ್ರಾಂತರಕಾರರು ದಂಪತಿಗಳಿಗೆ ಪ್ರೋಕ್ಷಣವನ್ನು ಹೇಳಿದ ವಿಚಾರ ಬೇರೆ) "ಏವಂ ಯದಿ ಶಾಂತಿಂ ಕುರ್ಯಾತ್ ತದಾ ಸರ್ವದೋಷಾತ್ ಪ್ರಮುಚ್ಯತೇನಾರೀ। ಸರ್ವಾರಿಷ್ಟಶಾಂತಿರಸ್ತ್ವಿತ್ಯಾಹ ಭಗವಾನ್ ಬೋಧಾಯನಃ॥ ಇಲ್ಲೂ ಕೂಡ ಸ್ತ್ರೀಯನ್ನು ಮಾತ್ರ ನಿರ್ದೇಶಿಸಿರುವ ದನ್ನು ಗಮನಿಸಬೇಕು.

ಹೀಗೆ, ದುಷ್ಟಕಾಲದಲ್ಲಿ ಪ್ರಥಮರಜೋದರ್ಶನವಾದ ನಿಮಿತ್ತದಿಂದ ಸಂಭವಿ ಸಿದ ದೋಷಗಳು ಋತುಶಾಂತಿಯಿಂದ ದೂರವಾಗಬೇಕಾದ್ದು ಸ್ತ್ರೀಗೆ. ತಂದೆಯು ಕರ್ತೃವಾಗಿದ್ದು (ವಿವಾಹದ ಪೂರ್ವದಲ್ಲಿ) ಋತುಶಾಂತಿಯನ್ನು ನೇರವೇರಿಸಲಿ, ಅಥವಾ ವಿವಾಹದ ನಂತರ ಪತಿಯು ಕರ್ತೃವಾಗಿದ್ದುಕೊಂಡು ಈ ಶಾಂತಿಯನ್ನು ನೆರವೇರಿಸಲಿ, ಶಾಂತಿಯ ಪ್ರಯೋಜನ ಒಂದೇ, ಸ್ತ್ರೀಗೆ ಪ್ರಾಪ್ತವಾದ ದೋಷ ಗಳನ್ನು ಹೋಗಲಾಡಿಸಿ ಅವಳಲ್ಲಿ ಗುಣಗಳನ್ನು ಶೇಖರಿಸುವದು. ತಂದೆ, ಅಥವಾ ಪತಿ ಇಬ್ಬರಲ್ಲಿ ಯಾರೇ ಕರ್ತೃಗಳಾಗಲಿ ಶಾಂತಿಯಿಂದುಂಟಾಗುವ ದೋಷದೂರೀ ಭಾವವು ಅವಳಿಗೆ ಮಾತ್ರ ಸಂಬಂಧಪಡುತ್ತದೆ. ಗುಣಾಧಾನಕ್ಕೆ ಆಶ್ರಯವೂ ಅವಳೇ ಹೊರತು ಈ ಅಂಶದಲ್ಲಿ ವೈಷಮ್ಯವೇನೂ ಇಲ್ಲ. ಋತುಶಾಂತಿ ಗರ್ಭಾಧಾನಹೋಮ ಗಳಿಗೆ ಪರಸ್ಪರ ಅಂಗಾಂಗಿಭಾವ, ಪ್ರಕರಣಗಳು ಇಲ್ಲದಿರುವದನ್ನು ಗಮನಿಸಬೇಕು. ಋತುಶಾಂತಿಯು ಒಂದು ಸ್ವತಂತ್ರ ಕರ್ಮವೆಂಬಂತೆ ಗೃಹ್ಯಸೂತ್ರದಲ್ಲಿ ವಿಹಿತವಾಗಿದೆ. ಕಾರಣ ವಿವಾಹಕ್ಕೆ ಮೊದಲೇ ನಿಮಿತ್ತವು ಪ್ರಾಪ್ತವಾದಾಗ ತಂದೆಯೇ ಈ ಶಾಂತಿ ಯಲ್ಲಿ ಕರ್ತೃವಾಗಲಡ್ಡಿಯಿಲ್ಲವೆಂದೀಗ ಸಿದ್ಧಾಂತ.

## ಪ್ರಯೋಜನ :

ಕನ್ಯಾ ಸಂಸ್ಕಾರಗಳನ್ನು ಮದುವೆಯ ಹಿಂದಿನ ದಿನವೇ ಮಾಡಿದರಾಯಿತೆಂದು ಕೊಂಡಿರುವ ಇಂದು ಮದುವೆಯೇ ಒದಗದ ಹೆಣ್ಣುಮಕ್ಕಳಿಗೆ ಕನ್ಯಾಸಂಸ್ಕಾರ ಹಾಗೂ ಋತುಶಾಂತಿಗಳು ಲೋಪ ಪೂರ್ವಪಕ್ಷದಲ್ಲಿ, ಸಿದ್ಧಾಂತದ ಪ್ರಕಾರ ಇವುಗಳಿಗೆ ಲೋಪ ವಿಲ್ಲ. ಪೂರ್ವಪಕ್ಷದ ಪ್ರಕಾರ ವಿಧಿಯ ಉಲ್ಲಂಘನೆ ತಂದೆಗೆ ಪ್ರತ್ಯವಾಯ. ಸಿದ್ಧಾಂತದ ಪ್ರಕಾರ ವಿಧಿಯ ಪರಿಪಾಲನೆ. ಎಂಬುದೀಗ ನಿಗಮನ.

(ಪ್ರಕೃತ "ಋತುಶಾಂತಿ ಕರ್ತೃತ್ವಾಧಿಕಾರಜಿಜ್ಞಾಸಾಧಿಕರಣವನ್ನು ಶಾಸ್ತ್ರೀಯ ಕ್ರಮದಲ್ಲಿ ಸಮರ್ಪಕವಾಗಿ ರಚಿಸಲಾಗಲಿಲ್ಲೆಂಬ ಕೊರತೆಯ ಅರಿವು ನನಗಿದೆ. ಇದೇ 'ವಿಷಯ'ವನ್ನಾಧರಿಸಿ ರಚಿಸಿದ ಸಮಂಜಸ, ಸರ್ವಥಾ ಸಮರ್ಪಕವಾದ ಅಧಿಕರಣಗಳು ಇನ್ನಷ್ಟು ಹೊರಬರಲೆಂದು ಶಾಸ್ತ್ರಪರಿಣತಮತಿಗಳಾದ ಹಿರಿಯ ವಿದ್ವಾಂಸರನ್ನು ಕೇಳಿಕೊಳ್ಳುತ್ತೇನೆ.)

—ಸಂ)



# ಪ್ರಸಂಗಿಕವಾಗಿ ಒಂದಿಷ್ಟು

'ಸ್ವರ್ಗಕಾಮೋ ಯಜೇತ'—ಎಂಬವೇ ಮೊದಲಾದ ವಿಧಿವಾಕ್ಯ ಸ್ಥಳದಲ್ಲಿ "ಯಾವ ಕರ್ಮಕ್ಕೆ ಏನು ಫಲ ಹೇಳಿದ್ದಾರೋ ಆ ಫಲವು ತನಗಿರಲೆಂದು ಬಯಸು ವವನು, ಅಂದರೆ ಆ ಫಲವನ್ನು ಅನುಭವಿಸುವವನು ಮಾತ್ರ ಆ ಕರ್ಮದಲ್ಲಿ ಅಧಿ ಕಾರಿ. ಅವನೇ ಆ ಕರ್ಮದಲ್ಲಿ ಕರ್ತೃ' ಎಂದು ಸಿದ್ಧಾಂತ ಮಾಡಿರುವದರಿಂದ ಋತುಶಾಂತಿಯಲ್ಲಿ ತಂದೆಗೆ ಕರ್ತೃತ್ವಾಧಿಕಾರವಿಲ್ಲ. ಋತುಶಾಂತಿಯ ಪ್ರಯೋಜನ ಹುಡುಗಿಗೆ ಪ್ರಾಪ್ತವಾದ ದೋಷಗಳ ನಿವಾರಣೆ. ಈ ದೋಷನಿವಾರಣೆಯೆಂಬ ಫಲವು ಹುಡುಗಿಗೆ ಸಂಬಂಧಪಡುತ್ತದೆಯೇ ಹೊರತು ತಂದೆಗೆ ಸಂಬಂಧಪಡುವದಿಲ್ಲ. ಯದವಗತಂಸತ್ ಸ್ವ-ವೃತ್ತಿತಯಾ ಇಷ್ಯತೇ 'ತತ್ ಪ್ರಯೋಜನಂ' ಪ್ರಯೋಜನ ಮನುದ್ದಿಶ್ಯ ನ ಮಂದೋಽಪಿ ಪ್ರವರ್ತತೇ, 'ಕರ್ಮದಫಲವು ತನಗಿರಲಿ, ಎಂದು ಅಪೇಕ್ಷಿಸುವವನು ಮಾತ್ರವೇ ಆ ಫಲಕ್ಕಾಗಿ ಹೇಳಿದ ಕರ್ಮದಲ್ಲಿ ಪ್ರವರ್ತಿಸುತ್ತಾನೆ. ಮಗಳಿಗೆ ಫಲಲಾಭವಾಗುವ ಈ ಋತುಶಾಂತಿಯಲ್ಲಿ ತಂದೆಗೆ ಪ್ರವೃತ್ತಿ ಹುಟ್ಟುವ ದಾದರೂ ಎಂತು ?

ಯಾರಿಗೆ ಆರೋಗ್ಯ ಬೇಕೋ ಅವನು ಔಷಧಸೇವಿಸುತ್ತಾನೆ. ಚೈತ್ರನ ಆರೋಗ್ಯಕ್ಕಾಗಿ ಮೈತ್ರನು ಔಷಧ ಸೇವಿಸುತ್ತಾನೆಯೇ ? ಭೀಮನು ಊಟ ಮಾಡಿ ದರೆ ರಾಮನಿಗೆ ಹೊಟ್ಟೆತುಂಬುತ್ತದೆಯೇ ? ಮಗಳಿಗೆ ಬಾಯಾರಿಕೆಯಾದಾಗ ತಂದೆಯು ನೀರು ಕುಡಿದರೆ ಮಗಳ ಬಾಯಾರಿಕೆ ದೂರಾಗುತ್ತದೆಯೇ ? ಹೀಗೆ, ಯಾರಿಗೆ ಕಾಯಿಲೆ, ಹಸಿವು, ನೀರಡಿಕೆಗಳು ದೂರಾಗಬೇಗಂಬ ಹಂಬಲವಿದೆಯೋ ಅವರೇ ಔಷದಿ, ಅನ್ನ, ನೀರುಗಳನ್ನು ಸೇವಿಸುವದು ಲೋಕದಲ್ಲಿ ಪ್ರಸಿದ್ಧವಿದೆ. ಈ ಕಾರಣದಿಂದ ಮಗಳ ಪ್ರಯೋಜನಕ್ಕಾಗಿ ತಂದೆಯು ಋತುಶಾಂತಿಯಲ್ಲಿ ಪ್ರವರ್ತಿ ಸಲು ಅವಕಾಶವಿಲ್ಲ ; ಎಂಬುದಿಲ್ಲಿ ಪೂರ್ವಪಕ್ಷಿಗಳವಾದ.

ಹೌದು, ಒಪ್ಪಿಕೊಳ್ಳಲೇಬೇಕು. ಆದ್ದರಿಂದಲೇ ತಂದೆ ಕಾಯಿಲೆ ಬಿದ್ದರೆ ನಾವೇಕೆ ಚಿಕಿತ್ಸೆ ಮಾಡಿಸಬೇಕು ? ತಂದೆಗೆ ಹಸಿವಾದರೆ ನಾವೇಕೆ ಅನ್ನಬಡಿಸಬೇಕು ? ಎಂದು ಇಂದಿನ ಮಕ್ಕಳು ಸವಾಲು ಹಾಕುತ್ತಾರೆ.

'ಸ್ವರ್ಗಕಾಮೋ ಯಜೇತ' ಎಂಬೀ ಮೊದಲಾದವು ಉತ್ಸರ್ಗಶಾಸ್ತ್ರವೆನಿಸುತ್ತವೆ. ಇಂತಹ ಸ್ಥಳಗಳಲ್ಲಿ ಫಲಭೋಕ್ತೃತ್ವಸಮಾನಾಧಿಕರಣವಾದ ಕರ್ತೃತ್ವವನ್ನು ಒಪ್ಪುವದು ನಿಜ. ಆದರೆ ಕೆಲವು ಕಡೆಗಳಲ್ಲಿ ಫಲವ್ಯಧಿಕರಣಕವಾದ (ಫಲ ಭೋಕ್ತೃತ್ವವ್ಯಧಿಕರಣವಾದ) ಕರ್ತೃತ್ವವನ್ನೂ ಕೂಡ ವಿಧಿಯನ್ನನುಸರಿಸಿ ಒಪ್ಪಬೇಕಾಗುತ್ತದೆ. ಶ್ರಾದ್ಧ ಹಾಗೂ ವೈಶ್ವಾನರೇಷ್ಟಿ ಮೊದಲಾದವು ಇಲ್ಲಿಗೆ ಉದಾಹರಣೆಗಳು ಎಂದು ಶಾಸ್ತ್ರಕಾರರು ಹೇಳುತ್ತಾರೆ. ಇಂತಹ ಸ್ಥಳಗಳಲ್ಲಿ ಪ್ರವೃತ್ತಿಯನ್ನು ಸಮರ್ಥಿಸುವ ದಕ್ಕೋಸ್ಕರವೇ ಪ್ರವೃತ್ತಿಪ್ರಯೋಜಕ ಫಲೇಚ್ಛಾಸಮಾನಾಧಿಕರಣಕವಾದ ಕರ್ತೃತ್ವವನ್ನು ಒಪ್ಪುತ್ತಾರೆ. 'ಮಗನಿಗೆ ಫಲವಾಗಲಿ' ಎಂಬ ಇಚ್ಛೆಯಿಂದ ತಂದೆಗೆ ಪ್ರವೃತ್ತಿ ಬರುವದುಂಟು. 'ಪಿತೃಗಳು ತೃಪ್ತರಾಗಲಿ, ಪಿತೃಗಳಿಗೆ ಪುಣ್ಯಲೋಕ ಪ್ರಾಪ್ತವಾಗಲಿ' ಎಂಬಂತಹ ಕಾಮನೆಯು ಮಗನಲ್ಲಿ ಉಂಟಾಗುದೂ ಉಂಟು. (ನಿತ್ಯನೈಮಿತ್ತಿಕ ಸ್ಥಳದಲ್ಲಾದರೋ ಪ್ರತ್ಯವಾಯ ಭೀತಿ, ವೈಧರಾಗಗಳೇ ಪ್ರವರ್ತಕಗಳಾತ್ತವೆನ್ನುತ್ತಾರೆ.) ಇದೇ ರೀತಿ ಋತುಶಾಂತಿಯ ಸ್ಥಳದಲ್ಲೂ 'ಪಂಚಮೇಹ್ನಿಶಾಂತಿಸ್ನಾನಂ ಪ್ರಕುರ್ವೀತ' ಎಂಬ ವಿಧಿಯ ಪ್ರಕಾರ ಪತಿಯು ಇನ್ನೂ ಪ್ರಾಪ್ತನಾಗದಿರುವಾಗ ಶಾಂತಿಸ್ನಾನವನ್ನು ಯಾರು ಮಾಡಿಸಬೇಕು ? (ಪ್ರಕುರ್ವೀತ = ಕಾರಯೇತ್ ?) ತಂದೆಯೇ ಮಾಡಿಸಬೇಕು. ಮಗಳಿಗೆ ಒಳ್ಳೆಯದಾಗಲಿ ಎಂಬ ಇಚ್ಛೆಯು ತಂದೆಯಲ್ಲಿರುವದು ಸಹಜ. ಮಗಳಿಗೆ ಒಳ್ಳೆಯದಾದರೆ ತಂದೆಗೆ ಸಂತಸವಾಗುತ್ತದೆ. ಮಗಳ ಏಳಿಗೆಯನ್ನು ನೋಡಿ ತಂದೆ ತಾಯಿಗಳು ಸಂತೋಷಪಡುವದಿಲ್ಲವೇ ? ಇದೂ ಒಂದು ಬಗೆಯ 'ಗೌಣ ಪುರುಷಾರ್ಥವೆನ್ನುತ್ತಾರೆ.

ಇನ್ನೂ ಒಂದು ವಿಚಾರ : ದುಷ್ಟಕಾಲಪ್ರಯುಕ್ತವಾಗಿ ಪ್ರಥಮರಜೋದರ್ಶನದಲ್ಲಿ ಮಗಳಿಗೆ ದೋಷಗಳು ತಗಲಿವೆ. ಈ ನಿಮಿತ್ತಕ್ಕೆ ನೈಮಿತ್ತಿಕವಾಗಿ ಋತುಶಾಂತಿಯು ವಿಹಿತವಾಗಿದೆ. 'ಅನುಷ್ಠಾನ ಮಾಡದಿದ್ದರೆ ತಂದೆಗೆ ಪ್ರತ್ಯವಾಯ ತಗಲುತ್ತದೆ. ಹೀಗೆ ಈ ಪ್ರತ್ಯವಾಯಭೀತಿಯೂ ಕೂಡ ತಂದೆಗೆ ಇಲ್ಲಿ ಪ್ರವರ್ತಕವೆನಿಸುತ್ತದೆ.

ಕಾಯಿಲೆ, ಹಸಿವು, ನೀರಡಿಕೆಗಳ ದೃಷ್ಟಾಂತವೂ ಕೂಡ ಇಲ್ಲಿ ವಿಷಮ. ಮದುವೆಗೆ ಮುಂಚೆ ಮಗಳು ಕಾಯಿಲೆ ಬಿದ್ದರೆ ಔಷಧಿ ಕೊಡಿಸುವವರು ಯಾರು ? ಮದುವೆಯಾಗುವವರೆಗೆ ಮಗಳಿಗೆ ಆಹಾರ ನೀಡುವವರಾರು ? ನೀಡುವವನು ತಂದೆಯಾದರೂ ತಿಂದು, ಕುಡಿಯುವವಳು ಅವಳೇ ತಾನೇ ? ಎಂದರೆ ಋತುಶಾಂತಿಯಲ್ಲೂ ಅಷ್ಟೇ ; ದೋಷನಿವೃತ್ತಿರೂಪಫಲವು ಮಗಳಲ್ಲಿ ಉಂಟಾಗುವದಾದರೂ ಆ ಫಲಕ್ಕೆ ಪ್ರಯೋಜಕವಾದ ಋತುಶಾಂತಿಯಲ್ಲಿ ತಂದೆಯು ಪ್ರವರ್ತಿಸುವದರಲ್ಲಿ ಅನುಪಪತ್ತಿಯೇನಿದೆ ?

ಪ್ರೌಢಾ ವಿವಾಹವು ಬಳಕೆಗೆ ಬಂದ ಶುರುವಿನಲ್ಲಿ ಈ ಕುರಿತು ನಾವು ಆಲೋಚಿಸದೇ ಇರುವ ಕಾರಣ ನಮಗಿಂದು ವಿವಾಹಪೂರ್ವದ ಋತುಶಾಂತಿಯು ಅನುಚಿತವಾಗಿ ತೋರುತ್ತದೆ ಅಷ್ಟೇ. ಕೆಲವರು ಈ ಕುರಿತು ಆಲೋಚಿಸಿದರೂ ಇನ್ನುಳಿದವರು ಇದನ್ನು ವಿರೋಧಿಸಿದರು.

(ಮೊನ್ನೆ ನಾನು ನನ್ನ ಪರಿಚಿತ ಪುರೋಹಿತರೊಬ್ಬರಿಗೆ ಮಾನ್ಯಶ್ರೀಶಾಸ್ತ್ರಿಗಳ 'ಋತುಶಾಂತಿಕರ್ತೃತ್ವಾಧಿಕಾರಮೀಮಾಂಸೆ' ಲೇಖನವನ್ನು ಕೊಟ್ಟು ಅಭಿಪ್ರಾಯ ಕೇಳಿದೆ. ಅವರ ಪ್ರತಿಕ್ರಿಯೆ ಅದ್ಭುತವಾಗಿತ್ತು : 'ಶ್ರೀ ಸೂರೀ ಶಾಸ್ತ್ರಿಗಳು ಬಹಳ ಚನ್ನಾಗಿ ಬರೆದಿದ್ದಾರೆ. ಋತುಶಾಂತಿಮಾಡಿದರೆ ಸ್ವರ್ಗ ಸಿಗುವದಿಲ್ಲ. ಆದ್ದರಿಂದ ತಂದೆಗೆ ಮಗಳ ಋತುಶಾಂತಿ ಮಾಡುವ ಇಚ್ಛೆ ಇಲ್ಲವೇ ಇಲ್ಲ. ಗಂಡನಾದರೋ ಹೆಂಡತಿಯು ಶುದ್ಧಳಾಗಲಿ ಎಂದು ಋತುಶಾಂತಿಮಾಡುತ್ತಾನೆ.'

ಇನ್ನೂ ಸ್ವಾರಸ್ಯವಾದ ವಿಮರ್ಶೆಗಳೂ ಇಲ್ಲಿ ಕೇಳಿಬರುವದುಂಟು. —ಸಂ)

ಈ ಮೇಲೆ ಉದಾಹರಿಸಿದ 'ನ್ಯಾಯ'ದಿಂದಾಗಿ ವಿವಾಹಪೂರ್ವದ ಪ್ರಥಮ ರಜೋದರ್ಶನವಲ್ಲಿನ ದೋಷನಿವಾರಣೆಗಾಗಿ ಮಾಡಬೇಕಾದ ಶಾಂತಿಯಲ್ಲಿ ತಂದೆಯು ಕರ್ತೃವಾಗಬಹುದೆಂಬುದು ಸಿದ್ಧವಾಗುತ್ತದೆ.

ವೈಶ್ವಾನರೇಷ್ಟಿವಿಧಿಯಲ್ಲಿನ ನಿಮಿತ್ತಗತಪುಂಸ್ತ್ವಕ್ಕೆ ವಿವಕ್ಷೆಯಿದೆಯೋ ? ಇಲ್ಲವೇ ? ಎಂಬುದು ಬೇರೆ ವಿಚಾರ. 'ಪುತ್ರೇ ಜಾತೇ' ಎಂದು ಶ್ರುತವಾಗಿದೆಯೇ ಹೊರತು 'ಪುತ್ರ್ಯಾಂ ಜಾತಾಯಾಂ' ಎಂದು ಶ್ರುತವಾಗಿಲ್ಲ. ಆದ್ದರಿಂದ ಋತುಶಾಂತಿಯಲ್ಲಿ ತಂದೆಗೆ ಕರ್ತೃತ್ವವು ಸಿದ್ಧವಾಗುವದಿಲ್ಲವೆಂದು ಹೇಳಲಾಗದು. ನಿಮಿತ್ತಗತ ಪುಂಸ್ತ್ವಕ್ಕೆ ಅಲ್ಲಿ ವಿವಕ್ಷೆ ಇರಲಿ ಇಲ್ಲದಿರಲಿ ವೈಶ್ವಾನರೇಷ್ಟಿಯು ಫಲಾಂಶದಿಂದ ಕಾಮ್ಯವೂ ಆಗಿರುವದರಿಂದ ಸ್ತ್ರೀಪ್ರಜೆಗೂ ಆ ಫಲವಾಗಲೆಂದು ಬಯಸಿದಾಗ ತಂದೆಗೆ ಕರ್ತೃತ್ವವು ಸ್ವರಸವಾಗಿಯೇ ಸಿದ್ಧವಾಗುತ್ತದೆ. ಋತುಶಾಂತಿಸ್ಥಳದಲ್ಲೂ ಅಷ್ಟೇ ; ಮಗಳಿಗೆ ಪ್ರಾಪ್ತವಾದ ದೋಷಗಳು ನಿವೃತ್ತವಾಗಲಿ ಎಂಬ ಇಚ್ಛೆಯಿಂದ ತಂದೆಗೆ ಪ್ರವೃತ್ತಿಯು ಸ್ವರಸವಾಗಿಯೇ ಸಿದ್ಧಿಸುತ್ತದೆ. 'ಆತ್ಮಾ ವೈಪುತ್ರನಾಮಾಸಿ' ಎಂಬಲ್ಲೂ ಸ್ತ್ರೀತ್ವಶ್ರುತವಾಗಿಲ್ಲ ಎಂಬ ಆಕ್ಷೇಪಕ್ಕೂ ಅವಕಾಶವಿದೆ. 'ಪುತ್ರಾಭಾವೇ ದುಹಿತಾ' ಎಂದು ಮುಂತಾಗಿ ಕ್ವಚಿತ್ ಮಗಳಿಗೂ ಪುತ್ರಭಾವವನ್ನು ಆರೋಪಿಸಿದ್ದೂ ಉಂಟು, ಕಾರಣ ಮದುವೆ ಮಾಡಿಕೊಡುವವರೆಗೂ ಮಗಳನ್ನೂ ಕೂಡ ತಂದೆಯು ಮಗನಂತೆ ನೋಡಿಕೊಳ್ಳುತ್ತಾನೆನ್ನಬಹುದು. (ಈ ಮಾತು ಉಪನಯನಾದಿ ಕೆಲವು ಸಂಸ್ಕಾರಗಳ ಸ್ಥಳದಲ್ಲಿ ಅನ್ವಯಿಸುವದಿಲ್ಲ).

ಋತುಶಾಂತಿಯಲ್ಲಿ ತಂದೆಯು ಕರ್ತೃವಾದಾಗ ಸಂಕಲ್ಪದಲ್ಲಿ 'ಮಮ ಪುತ್ರ್ಯಾಃ...ಎಂಬ ಊಹವೊಂದು ವಿಶೇಷವೇ ಹೊರತು ಮಿಕ್ಕ ಅಂಶಗಳಲ್ಲೇನೂ ವ್ಯತ್ಯಾಸವಿಲ್ಲ. ಕಾರಣ ಇದುವರೆಗೆ ಉಪಲಬ್ಧವಾದ ಪ್ರಮಾಣಗಳ ಪ್ರಕಾರ ಋತು ಶಾಂತಿಯಲ್ಲಿ ತಂದೆಗೂ ಕರ್ತೃತ್ವಾಧಿಕಾರ ಸಿದ್ಧಿಸಿದೆ.

'ವಾದ ಸ್ಥಿರೀಕರಣ'ಕ್ಕಾಗಿ ಅಪೇಕ್ಷಿತವಾದ ಮೀಮಾಂಸಾನ್ಯಾಯವನ್ನು ಇಲ್ಲಿಗೆ ಅಳವಡಿಸಿದ್ದಾಗಿದೆ. ಇದೀಗ ಪ್ರತಿಪಕ್ಷದವರು ತಮ್ಮವಾದವನ್ನು ಸ್ಥಿರೀಕರಿಸಲು ಈ ಅಪವಾದಶಾಸ್ತ್ರವನ್ನು ತಳ್ಳಿಹಾಕುವ ಹಾಗೂ ಇಲ್ಲಿ ಅನ್ವಯಿಸುವಂತಹ ಪ್ರತಿ ಪ್ರಸವ ಶಾಸ್ತ್ರವೊಂದನ್ನು ಉದಾಹರಿಸಿ ಇಲ್ಲಿಗೆ ಅಳವಡಿಸುವದು ಕ್ರಮಪ್ರಾಪ್ತವೆನಿಸು ತ್ತದೆ. ಋತುಶಾಂತಿಯಲ್ಲಿ ತಂದೆಗೆ ಕರ್ತೃತ್ವಾಧಿಕಾರವಿಲ್ಲವೆಂಬುದರ ಕುರಿತು ಸ್ಪಷ್ಟ ವಾದ ಶಾಸ್ತ್ರವಚನವೇನಾದರೂ ಇದ್ದಲ್ಲಿ ಅದನ್ನೂ ಇಲ್ಲಿ ಉದಾಹರಿಸಬಹುದು.

ವಿವಾಹಪೂರ್ವದ ಕನ್ಯಾಸಂಸ್ಕಾರ, ಋತುಶಾಂತಿಗಳಿಂದ ಕನ್ಯೆಯು ಶುದ್ಧಳಾಗಿ ಹವ್ಯಕವ್ಯಗಳ ಪಾಕಪರಿವೇಷಣಗಳಿಗೂ ಅರ್ಹಳಾಗುತ್ತಾಳೆಂಬ ಅಂಶ ನನಗಿನ್ನೂ ಮನದಟ್ಟಾಗಲಿಲ್ಲ. 'ಪಾಣಿಗ್ರಹೋ ವಿಧಿಃ ಸ್ತ್ರೀಣಾಮೌಪನಾಯನಿಕಃ ಸ್ಮೃತಃ' ಎಂಬ ವಾಕ್ಯದ ಪ್ರಕಾರ ವಿವಾಹದನಂತರವೇ ಅವಳು ಹವ್ಯಕವ್ಯಗಳ ಪಾಕಾದಿಗಳಲ್ಲಿ ಅರ್ಹಳೆಂದು ಸಾರ್ವತ್ರಿಕವಾಗಿ ಗೃಹೀತವಾಗಿದೆ. ಗರ್ಭಾಧಾನಹೋಮದ ನಂತರವೇ ಹವ್ಯಕವ್ಯಗಳಲ್ಲಿ ಅವಳು ಗ್ರಾಹ್ಯಳೆಂಬುದು ಶಿಷ್ಟಾಚಾರ. 'ಏವಂ ಯದಿ ಶಾಂತಿಂ ಕುರ್ಯಾತ್ತತೋ ನಾರೀ ದೋಷಾತ್ ಪ್ರಮುಚ್ಯತೇ' ಎಂಬಲ್ಲಿ ಪ್ರಾಕರಣಿಕವಾಗಿ ಉಪಸ್ಥಿತವಾದ ರಜೋದೋಷಗಳು ಮಾತ್ರ ವಿವಕ್ಷಿತವೇ ಹೊರತು ಪ್ರಾಕರಣಿಕ ವಲ್ಲದ ವಿಶೇಷವಾದ ಶುದ್ಧಿ, ಅರ್ಹತೆಗಳು ಕೂಡ ಈ ವಿಧಿಗೆ ವಿಷಯವಾಗುತ್ತ ವೆಂದು ಹೇಳಲು ಯುಕ್ತಿ ಸಾಲದು. ಇದಕ್ಕೂ ಹೆಚ್ಚಿನ ಪ್ರಬಲ ಪ್ರಮಾಣವೇನಾ ದರೂ ಇದ್ದಲ್ಲಿ ಆಗ ಒಪ್ಪಬಹುದೇ ಹೊರತು ಸದ್ಯದ ಮಟ್ಟಿಗಂತೂ ನನಗದು ಮನ ದಟ್ಟಾಗದೇ ಇದ್ದುದರಿಂದ ಈ ಕುರಿತು ಏನೂ ಹೇಳಲಾರೆ.

ಕೊನೆಯದಾಗಿ 'ನಿರ್ದೋಷಾ ಲಕ್ಷಣವತೀ ಸಾಲಂಕಾರಗುಣಾನ್ವಿತಾ' ಎಂದು ಮುಂತಾಗಿ ಲಾಕ್ಷಣಿಕರೂ ಕೂಡ ನಿರ್ದೋಷತೆಗೆ ಮೊದಲ ಸ್ಥಾನ ಕೊಡುವದನ್ನು ನೋಡಿದಾಗ, ಇಲ್ಲೂ ಕೂಡ ಪ್ರಥಮರಜೋದರ್ಶನದಲ್ಲಿ ಹುಡುಗಿಗೆ ಘಟಿಸಿದ ದೋಷಗಳನ್ನು ಋತುಶಾಂತಿಯ ಅನುಷ್ಠಾನದಿಂದ ಕಳೆದೇ ಮದುವೆ ಮಾಡುವದು ಸೂಕ್ತವಷ್ಟೇ ಅಲ್ಲ. ; ಶಾಸ್ತ್ರೀಯವೂ ಹೌದೆಂಬುದೀಗ ಪ್ರಾಸಂಗಿಕತೆಯ ನಿಗಮನ.

o o o o

ವಿವಾಹಕ್ಕೆ ಮೊದಲು ಹುಡುಗಿಯು ಋತುಮತಿಯಾದರೆ ತನ್ನಿಮಿತ್ತವಾದ ಋತುಶಾಂತಿಯನ್ನು ತಂದೆಯು ನೆರವೇರಿಸಬಹುದೆಂಬುದು ಪ್ರಾಮಾಣಿಕವಾಗಿ ಸಿದ್ಧವಾದರೂ ಹಾಗೆ ಆಚರಣೆಗೆ ಬರುವದು ಸಂದಿಗ್ಧವೇ ಸರಿ. 'ಅತ್ರ ಯಾಜ್ಞಿಕಾಸ್ತು ಅನ್ಯಥೈವಾಚರಂತಿ' ಎಂಬಂತೆ ಇಲ್ಲಿಯೂ ಕೂಡ 'ಪುರೋಹಿತಾಸ್ತು ಅನ್ಯಥೈವಾನುಷ್ಠಾಪಯಂತಿ' ಎಂಬುದಿಷ್ಟೇ ಪ್ರಕೃತಕ್ಕೆ ಸಮಾಧಾನ.

—ಸಂ



# ನನ್ನ 'ನ ಪ್ರಾಜ್ಞಾಯತ ಕಿಂಚನ'ಕ್ಕೆ

## ಶ್ರೀವರ್ಮಾ ಶಾಸ್ತ್ರಿಗಳ ಪ್ರತಿಕ್ರಿಯೆ ಇಂತಿದೆ :

'ನ ಪ್ರಾಜ್ಞಾಯತ ಕಿಂಚನ'–ಎಂಬ ಮಾತಿಗೆ ನಗು ಬರುತ್ತದೆ. ಲೌಕಿಕ ವೈದಿಕ ಉದಾಹರಣೆಯೊಂದಿಗೆ ಬರೆದದ್ದು ತಿಳಿಯದಿದ್ದರೆ ಅದನ್ನು ತಿಳಿಸಲು ಬ್ರಹ್ಮನಿಂದಲೂ ಶಕ್ಯವಾಗಲಾರದು.

ತನಗೆ ಫಲವುಬೇಕೆಂದು ಬಯಸುವವರೇ ಆ ಆ ಕರ್ಮದಲ್ಲಿ ಅಧಿಕಾರಿಗಳೆಂದು ಸ್ಪಷ್ಟವಾಗಿ ಬರೆದಿದ್ದರೂ ತಿಳಿದಿಲ್ಲವೆನ್ನುವ ಮೀಮಾಂಸಾವಿದ್ವಾಂಸನನ್ನು ನಾನಿಂದು ಕಂಡೆ.

1. ನನ್ನ ಬರವಣಿಗೆಯಲ್ಲಿ ನನ್ನ ಉದ್ದೇಶಕ್ಕೆ ವಿಪರೀತವಾದ ವಚನವನ್ನು ತೋರಿಸುವಿರಾ ? ಅಥವಾ ಯಾವ ವಚನದಿಂದ ತಂದೆಗೆ ಕರ್ತೃತ್ವವಿದೆಯೆಂದು ಸಾಧಿಸಿದಂತಾಗಿದೆ ? ಯಾರಿಗಾದರೂ ಯಾರಾದರೂ ಒಳ್ಳೆಯದಾಗಲೆಂದು ಬಯಸಿದ ಮಾತ್ರಕ್ಕೆ ಆ ಒಳ್ಳೆಯದಾಗಲು ಅವಶ್ಯವುಳ್ಳ ಕರ್ಮಗಳನ್ನು ಮಾಡಲು ಅಧಿಕಾರಿಯಾಗುವರೋ ? ಅದನ್ನು ಕರ್ಮಮೀಮಾಂಸೆಯು ಒಪ್ಪುವದೇ ?

2. ನಾನು ನಿಮಗೆ ಸ್ವರ್ಗವಾಗಲೆಂದು ಬಯಸಿದರೆ ಆ ಯಾಗಕ್ಕೆ ನಾನು ಅಧಿಕಾರಿಯಾಗುವನೇ ?

3. ನಿಮಗೆ ಶಾಕುಂತಲ ನಾಟಕವೂ ಧರ್ಮನಿರ್ಣಾಯಕವಾಯ್ತೇ ?
4. ಅಲ್ಲಿ ಕಣ್ವರು ಪ್ರತಿಕೂಲದೈವಶಮನ ಮಾಡಿದರೇ ?
5. ಶಕುಂತಲೆಗೆ ಶಾಪ ಬಂದಿಲ್ಲವೇ ? ದುಷ್ಯಂತನು ಆಕೆಯನ್ನು ತಿರಸ್ಕರಿಸಿಲ್ಲವೇ ?
6. ಕಣ್ವರು ಆ ಶಾಂತಿ ಮಾಡಿದ್ದರಿಂದಲೇ ಶಕುಂತಲೆಗೆ ಆ ದುರವಸ್ಥೆ ಬಂತೇ ?

7. ಕಣ್ವರು ಆಶ್ರಮದಲ್ಲೇ ಇದ್ದು ಆಕೆಗೆ ಬರುವ ದೂರ್ವಾಸರ ಶಾಪವನ್ನು ತಪ್ಪಿಸಲಾಗುತ್ತಿದ್ದಿಲ್ಲವೇ ? ಏತಕ್ಕೆ ಸೋಮತೀರ್ಥಕ್ಕೆ ಹೊಗಿದ್ದು ? ಶಿಷ್ಯರನ್ನಾದರೂ ಕಳಿಸಬಹುದಾಗಿತ್ತಲ್ಲವೇ ? ಶಿಷ್ಯರೂ ಶಕುಂತಲೆಯ ಹಿತಚಿಂತಕರಲ್ಲವೇ ?

8. ಲಗ್ನಮಾಡಿಕೊಟ್ಟ ಮೇಲೆ ಬೇರೆಯವರು ಅಪಹರಿಸಿದರೆ ಆ ತಂದೆಗೆ ಅದು ಹಿತವೇ ? ಆತನಿಗೆ ಸಂಬಂಧವಿಲ್ಲವೇ ?

9. ತಂದೆಗೆ ಋತುಶಾಂತಿಯ ಅಧಿಕಾರವಿರುವದಿಲ್ಲವೆಂಬ ವಚನವನ್ನು ನನಗೆ ತರಿಸಿಕೊಡುವಿರಾ ? ವಿದ್ವಾಂಸರಿಂದ.

10. ನೀವು ಓದಿದ ಮೀಮಾಂಸಾ ಗ್ರಂಥಗಳಲ್ಲೆಲ್ಲಿಯಾದರೂ ಅಧಿಕಾರ ನಿರ್ಣಯಿಸಲು ಹೊರಟಿದ್ದು ಅಲ್ಲಿ ಅಧಿಕೃತೇತರರನ್ನು ನಿಷೇಧಿಸಿದ್ದಾರೆಯೇ ? ಹಾಗಿದ್ದರೆ ತಂದೆಯಂತೆ ಋತುಶಾಂತಿಯಲ್ಲಿ ಅಣ್ಣ, ತಮ್ಮ, ಮಾವ, ಭಾವ, ಬಂಧುಗಳು ಮುಂತಾದವರನ್ನು ಅಧಿಕಾರಿಗಳೆಂದು ಹೇಳುವದರಲ್ಲಿ ಯಾವ ಪ್ರತಿಬಂಧಕ ? ಅಥವಾ ಆ ಕನ್ಯೆಗೆ ಹಿತಬಯಸುವರೆಲ್ಲರೂ ಅಧಿಕಾರಿಗಳೇ ?

11. ತಂದೆಯು ಅಧಿಕಾರಿಯಾದವನ ಪ್ರತಿನಿಧಿಯೋ ? ಅಥವಾ ಋತ್ವಿಜನೋ ?

12. ಪತಿಯು ಆ ಋತುಶಾಂತಿಗೆ ಅಧಿಕಾರಿಯೆಂದು ಒಪ್ಪುವಿರಾ ?

13. ಪ್ರಯೋಗಕಾರರು ತಂದೆಗೆ ಕರ್ತೃತ್ವಾಧಿಕಾರವನ್ನು ಹೇಳಿಲ್ಲ ಎಂಬುದು ಕನ್ಯಾವಿವಾಹವು ರೂಢಿಯಲ್ಲಿದ್ದಾಗಿನ ಮಾತು ಅದು, ಎಂದರೆ ಏನು ಹೇಳುವಿರಿ ?

14. ಮಿಕ್ಕ ಯುಕ್ತಿಗಳಲ್ಲಿ ಕೆಲವು ಪ್ರಕೃತೋಪಯೋಗಿಯಾದವುಗಳಾವವೆಂದು ಹೇಳುವಿರಿ ?

15. ಮೀಮಾಂಸಕರಾದ ನೀವು ಅಧಿಕಾರಿನಿರ್ಣಯಕ್ಕೆ ಯಾವ ಅಧಿಕರಣವೆಂದು ಇನ್ನೊಬ್ಬರನ್ನು ಪ್ರಶ್ನಿಸುವದೇ ?

ಈ ಪ್ರಶ್ನೆಗಳನ್ನು ಉತ್ತರಸಹಿತ ಪ್ರಕಟಿಸುವಿರಾಗಿ ನಂಬುತ್ತೇನೆ. ವಿಷಯ ವಿವೇಚನೆಯಾಗಲೆಂದು ಬರೆದಿದೆ. ಇದರಿಂದ ಬೇಸರವಾಗಬಾರದು,
'ಯದವಗತಂ ಸತ್ ಸ್ವವೃತ್ತಿತಯಾ ಇಷ್ಯತೇ ತತ್ ಪ್ರಯೋಜನಂ'
ಎಂಬ ಭಾಷ್ಯವಚನವು ನೆನಪಿರಬಹುದು. !

—ವಿದ್ವಾನ್‌ರಾ ಮಚಂದ್ರ ಶಾಸ್ತ್ರೀ ಸೂರಿಃ

ಕ್ರೋಧನ ಸಂ,
ಪ್ರಥಮೈಕಾದಶೀ ಶುಕ್ರವಾರ
28-6-85

ಂ ಂ ಂ ಂ ಂ

## ಮಾನ್ಯಶ್ರೀ ಶಾಸ್ತ್ರಿಗಳ ಆಕ್ಷೇಪಗಳಿಗೆ ಸ್ವಾಗತ

(ಶಾಸ್ತ್ರೀಯವೂ ವಿದ್ವತ್ಪರಿಪೂರ್ಣವೂ ಹಾಗೂ ಪ್ರಾಮಾಣಿಕವೂ ಆದ, ಮಾನ್ಯಶ್ರೀ ಶಾಸ್ತ್ರಿಗಳ ಈ ಮೊಲಿನ ಆಕ್ಷೇಪಗಳಿಗೆ ಸಮಂಜಸವಾದ ಸಮಾಧಾನ ಸೂಚಿಸುವ ಯೋಗ್ಯತೆ ನನ್ನಲ್ಲಿಲ್ಲವೆಂಬುದನ್ನು ಒಪ್ಪಿಕೊಂಡು ನನ್ನ ದೃಷ್ಟಿಗೆ ತೋಚಿದ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸಬಯಸುತ್ತೇನೆ. ಇದನ್ನು ತಳ್ಳಿಹಾಕುವ ಅಧಿಕಾರ ಮಾನ್ಯ ಶಾಸ್ತ್ರಿಗಳಿಗೆ ಇದ್ದೇ ಇದೆ.

ಮಾನ್ಯ ಶಾಸ್ತ್ರಿಗಳ ಲೇಖನ 'ಋತುಶಾಂತಿಕರ್ತೃತ್ವಾಧಿಕಾರಮೀಮಾಂಸೆ'ಯ ಬಗೆಗೆ ಈ ಹಿಂದೆ ವ್ಯಕ್ತಪಡಿಸಿದ್ದ ನನ್ನ ಪ್ರತಿಕ್ರಿಯೆಯನ್ನು ಓದುಗರ ಸೌಕರ್ಯಕ್ಕಾಗಿ ಇಲ್ಲಿ ಪುನಃ ಉದಾಹರಿಸುತ್ತಿದ್ದೇನೆ. – ಸಂ)

ಂ ಂ ಂ ಂ ಂ

## 'ಕೋಲಾಹಲೋ ಮಹಾನಾಸೀತ್' 'ನ ಪ್ರಾಜ್ಞಾಯತ ಕಿಂಚನ'

ವಿದ್ವಾನ್ ಶ್ರೀ ರಾಮಚಂದ್ರ ಶಾಸ್ತ್ರಿಗಳು ಸೂರೀ ಅವರ 'ಋತುಶಾಂತಿಕರ್ತೃತ್ವಾಧಿಕಾರಮೀಮಾಂಸೆ'ಯೆಂಬ ಲೇಖನವು ಅವರ ಉದ್ದೇಶಕ್ಕೆ ವಿಪರೀತವಾಗಿ ಋತುಶಾಂತಿಯಲ್ಲಿ ತಂದೆಗೂ ಕರ್ತೃತ್ವಾಧಿಕಾರವಿದೆಯೆಂದೇ ಸಾಧಿಸಿದಂತಾಗಿದೆ. ಮಕ್ಕಳ ಶ್ರೇಯಸ್ಸನ್ನು ತಂದೆತಾಯಿಗಳು ಬಯಸುವದಿಲ್ಲವೆನ್ನಲಾಗುತ್ತದೆಯೇ ? 'ದೈವಮಸ್ಯಾಃ ಪ್ರತಿಕೂಲಂ ಶಮಯಿತುಂ ಸೋಮತೀರ್ಥಂ ಗತಃ' ಎಂಬೀ ಶಾಕುಂತಲದ ಮಾತೊಂದು ಇಲ್ಲಿ ನೆನಪಾಗುತ್ತದೆ. 'ಹುಣ್ಣಿಮೆ, ಅಮಾವಾಸ್ಯೆಗಳಂದು ಪ್ರಥಮ ರಜೋದರ್ಶನವಾದವಳನ್ನು ಬೇರೆಯವರು ಅಪಹರಿಸುವರು' ಎಂಬಲ್ಲಿ ವಿವಾಹದ ಪೂರ್ವದಲ್ಲಿ ಒಂದು ವೇಳೆ ಅಪಹೃತಳಾದರೆ ಆ ದೋಷವೂ ಪತಿಕುಲಕ್ಕೇ ಸಂಬಂಧಪಡುತ್ತದೆಯೇ ? ಕಾರಣ 'ಋತುಶಾಂತಿಯಲ್ಲಿ ತಂದೆಗೆ ಕರ್ತೃತ್ವಾಧಿಕಾರವನ್ನು ಪ್ರಯೋಗಕಾರರು ಹೇಳಿಲ್ಲ' ಎಂಬುದೊಂದೇ ಪ್ರಕೃತಕ್ಕೆ ಇದ್ದುದರಲ್ಲಿ ಗಟ್ಟಿ ಮಾತಾಗಬಹುದೇ ಹೊರತು ಮಿಕ್ಕ ಯುಕ್ತಿಗಳಲ್ಲಿ ಕೆಲವು ಪ್ರಕೃತೋಪಯೋಗಿಳೆಗನಿಸುವದಿಲ್ಲ.

ವಾದಿ-ಪ್ರತಿವಾದಿಗಳಿಬ್ಬರೂ ತಮ್ಮ ತಮ್ಮ ವಾದಗಳನ್ನು ಸ್ಥಿರೀಕರಿಸಲು ಪೂರ್ವಮೀಮಾಂಸಾ ಶಾಸ್ತ್ರದ ಅಧಿಕರಣಗಳ ಪೈಕಿ ಯಾವುದು ಇಲ್ಲಿಗೆ ಅನ್ವಯಿಸುತ್ತ ದೆಂಬುದನ್ನು ಪರಿಶೀಲಿಸಿ ಸಂದರ್ಭಕ್ಕೆ ತಕ್ಕಂತೆ ಅಳವಡಿಸಬೇಕು. ಹಾಗೂ ಸ್ಮೃತಿ, ಪ್ರಯೋಗಗಳ ವಚನಗಳನ್ನು ಉದಾಹರಿಸಬೇಕು. ಇದುವರೆಗೆ ಉದಾಹೃತವಾದ ವಚನಗಳು ಇವರ ಎಲ್ಲ ಹೇಳಿಕೆಗಳನ್ನು ಸಮರ್ಥಿಸುವಲ್ಲಿ ಪ್ರಾಮಾಣಿಕವೆಂದು ನನ ಗನಿಸುವದಿಲ್ಲ.

ವಿಚಾರಕ್ಕಾಗಿ ಉತ್ಥಿತವಾದ ಈ ಜಿಜ್ಞಾಸೆಗೆ ಸಂಬಂಧಪಟ್ಟಂತೆ ವಿದ್ವಾಂಸರ ಪ್ರಾಮಾಣಿಕ ಪ್ರತಿಕ್ರಿಯೆಗಳಿಗೆ ಆದಾರದ ಸ್ವಾಗತವಿದೆ.

—ಯು. ಕೃಷ್ಣಶರ್ಮಾ

15-5-85.

o o o o o

# ಇಲ್ಲಿ ನನ್ನ ಪ್ರತಿಕ್ರಿಯೆ

'ನ ಪ್ರಾಜ್ಞ್ನಾಯತ ಕಿಂಚನ ?  ಹೌದು

ಪೂಜ್ಯಶ್ರೀ ಶಾಸ್ತ್ರಿಗಳ ಇಲ್ಲಿನ ಮೊದಲ ಎರಡು ವಾಕ್ಯಗಳಿಗಾಗಿ ಧನ್ಯವಾದಗಳು

1. ವಿವಾಹಕ್ಕೆ ಮೊದಲು ಕನ್ಯೆಯು ಋತುಮತಿಯಾದರೆ, ಪ್ರಥಮರಜೋದರ್ಶನದಲ್ಲಿ ಸಂಭವಿಸಬಹುದಾದ ದೋಷಪರಿಹಾರಕ್ಕಾಗಿ ವಿಧಿಸಿದ ಋತುಶಾಂತಿಯಲ್ಲಿ ಕನ್ಯೆಯ ತಂದೆಯು ಅಧಿಕಾರಿಯಾಗಬಹುದೇ ? ಇಲ್ಲವೇ ಎಂಬುದಿಲ್ಲಿನ ಜಿಜ್ಞಾಸಿತ ವಿಷಯ. ದಶಾಸಂಧಿಶಾಂತಿಯ ಉದಾಹರಣೆಯನ್ನೇ ಮುಂದಿಟ್ಟುಕೊಂಡರೂ ಇಲ್ಲಿಗೆ ಸಾಕು. ವಿವಾಹಪೂರ್ವದಲ್ಲಿ ಋತುಶಾಂತಿಯು ಪ್ರಸಕ್ತವಾದರೆ ಅಲ್ಲಿ ಕನ್ಯೆಯ ತಂದೆಯು ಅಧಿಕಾರಿಯಾಗಬಹುದೆಂಬುದನ್ನು ಇಲ್ಲಿ ವಸ್ತುನಿಷ್ಠವಾಗಿ ಆಲೋಚಿಸಿದಾಗ ಯಾರಾದರೂ ಹೇಳಬಹುದು, ಅದಿರಲಿ.

'ಸ್ವರ್ಗಕಾಮೋ ಯಜೇತ' 'ಅಗ್ನಿಹೋತ್ರಂಜುಹುಯಾತ್ ಸ್ವರ್ಗಕಾಮಃ 'ದರ್ಶಪೂರ್ಣಮಾಸಾಭ್ಯಾಂ ಸ್ವರ್ಗಕಾಮೋ ಯಜೇತ' ಎಂಬೀ ಮೊದಲಾದವು ಉತ್ಸರ್ಗಶಾಸ್ತ್ರಗಳೆನಿಸುತ್ತವೆ. ಉತ್ಸರ್ಗಶಾಸ್ತ್ರಗಳಿಗೆ ಪ್ರತಿಯಾಗಿ ಕೆಲವೊಮ್ಮೆ ಅಪವಾದಶಾಸ್ತ್ರಗಳೂ ಇರುವದು ಉಂಟು. ಉತ್ಸರ್ಗಶಾಸ್ತ್ರಕ್ಕೆ ವಿಷಯವಾದ ವಿಧಿಯ ಅಂಶಗಳಲ್ಲಿಲ್ಲಾದರೂ ಅಪವಾದಶಾಸ್ತ್ರವು ಪ್ರವರ್ತಿಸುತ್ತದೆಯೋ ? ಎಂಬುದನ್ನು ಪರಿಶೀಲಿಸಬೇಕೆಂದು ಶಾಸ್ತ್ರಜ್ಞರು ಹೇಳುತ್ತಾರೆ. ಪ್ರಥಮರಜೋದರ್ಶನದಲ್ಲಿ ದುಷ್ಟಕಾಲದ ನಿಮಿತ್ತವಾಗಿ ಮಗಳಿಗೆ ಸಂಭವಿಸಿದ ದೋಷಗಳ ಪರಿಹಾರಕ್ಕಾಗಿ ಮಾಡಬೇಕಾದ ಶಾಂತಿಯಲ್ಲಿ 'ಸ್ವರ್ಗಕಾಮೋ ಯಜೇತ' ಎಂಬಿವೇ ಮೊದಲಾದ ಉತ್ಸರ್ಗಶಾಸ್ತ್ರದ ಪ್ರಕಾರ ತಂದೆಗೆ ಅಧಿಕಾರವು ಸಿದ್ಧಿಸದೇ ಹೋದಾಗ ಇಲ್ಲಿಗೆ ಅನ್ವಯಿಸುವ ಅಪವಾದಶಾಸ್ತ್ರವಿದ್ದರೆ ಅದನ್ನು ಅನ್ವಯಿಸಿ ನೋಡಬೇಕಾದುದು ಇಲ್ಲಿಗೆ ಕ್ರಮಪ್ರಾಪ್ತವೆನಿಸುತ್ತಿತ್ತು. ಅಪವಾದಶಾಸ್ತ್ರದಹೆಸರೆತ್ತಿದರೆ ತಮ್ಮ ಉದ್ದೇಶಕ್ಕೆ ಪ್ರತಿಕೂಲತೆಯಾಗುವದನ್ನು ಮನದಂದ ಮಾನ್ಯ ಶಾಸ್ತ್ರಿಗಳು ಅಪವಾದ ಶಾಸ್ತ್ರವನ್ನು ಮುಚ್ಚಿಟ್ಟು ಉತ್ಸರ್ಗಶಾಸ್ತ್ರವನ್ನು ಮುಂದೊಡಿದ್ದಾರೆ. ಅವರಿಲ್ಲಿ

ಉತ್ಸರ್ಗಶಾಸ್ತ್ರವನ್ನು ಉದಾಹರಿಸಿದ್ದೇ ಅಪವಾದಶಾಸ್ತ್ರ ಪ್ರವೃತ್ತಿಗೆ ದಾರಿಯಾಯಿತು. ಆಕಸ್ಮಿಕವಾಗಿ ಇಲ್ಲಿ ಸಂಭವಿಸಿದ ಈ 'ವ್ಯಾಘಾತ'ವನ್ನೇ ನಾನಿಲ್ಲಿ ಉದ್ದೇಶಕ್ಕೆ ವಿಪ ರೀತವಾಗಿ' ಎಂಬ ಮಾತಿನಿಂದ ಸೂಚಿಸಿದ್ದು. ಹೀಗೆ 'ಸ್ವರ್ಗಕಾಮೋ ಯಜೇತ' ಎಂಬಿವೇ ಮೊದಲಾದ ಉತ್ಸರ್ಗಶಾಸ್ತ್ರಗಳ ಉದಾಹರಣೆಯೇ ಪ್ರಕೃತಕ್ಕೆ 'ಉದ್ದೇಶ ವಿಪರೀತ'ವಾಗಿ ಪರಿಣಮಿಸಿತು. ಅಂದರೆ ಅಪವಾದಶಾಸ್ತ್ರದ ಪ್ರವೇಶದಿಂದಾಗಿ ಋತುಶಾಂತಿಯಲ್ಲಿ ತಂದೆಗೂ ಕರ್ತೃತ್ವಾಧಿಕಾರವಿದೆಯೆಂದು ಸಾಧಿಸಿದಂತಾಯಿತು. ಮಗಳಿಗೆ ತಂದೆಯು 'ಯಶಾರಾದರೂ' ಅಲ್ಲ. ಮದುವೆಯಾಗುವವರೆಗಿನ ಅವಳ ಎಲ್ಲ ಯೋಗಕ್ಷೇಮ ಜವಾಬ್ದಾರಿಯನ್ನು ಹೊತ್ತ 'ಅಧಿಕಾರಿ' ಆದ್ದರಿಂದಲೇ ವಿವಾಹಪೂರ್ವದಲ್ಲಿ ಮಗಳ ಒಳಿತಿಗಾಗಿ ತಂದೆಯು ಕರ್ಮಾನುಷ್ಠಾನ ಮಾಡುವದನ್ನು ಕರ್ಮಮೀಮಾಂಸೆಯು ಒಪ್ಪುತ್ತದೆ.

2. ಋತ್ವಿಕ್ ರೂಪದಲ್ಲಿ ಮಾತ್ರ.

3. ಕ್ಷಮಿಸಬೇಕು ; ಶಾಕುಂತಲದ ಈ ವಾಕ್ಯವನ್ನು ಉದಾಹರಿಸುವ ಸಮಯದಲ್ಲಿ 'ಕಾವ್ಯಾಲಾಪಾಂಶ್ಚ ವರ್ಜಯೇತ್' ಎಂಬೀ ನಿಷೇಧವು ನನಗೆ ನೆನಪಾಗಲಿಲ್ಲ. ಈ ಅಂಶದಲ್ಲಿ ನಾನು ಎಡವಿದ್ದು ನಿಜ.

ವಸ್ತುತಃ ನಾನಿಲ್ಲಿ ಶಾಕುಂತಲದ ಆ ಮಾತನ್ನು ಉದಾಹರಿಸಿದ್ದರಲ್ಲಿ ಅನೌಚಿತ್ಯ' ವೇನೂ ಇಲ್ಲ. ಬದಲಾಗಿ ಹೆಚ್ಚು ಗಾರಿಕೆಯೇ ಗಮನಿಸುವಂತಿದೆ. 'ಧರ್ಮನಿರ್ಣಾಯಂಕ ವೆಂಬ ಅರ್ಥದಲ್ಲಿ ನಾನು ಶಾಕುಂತಲವನ್ನು ಉದಾಹರಿಸುತ್ತಿಲ್ಲ. ಮಗಳ ಯೋಗಕ್ಷೇಮ ಕ್ಕಾಗಿ, ಅನಿಷ್ಟಪರಿಹಾರಕ್ಕಾಗಿ ತಂದೆಯು ಅನುಷ್ಠಾನ ಮಾಡುವ ಪದ್ಧತಿಯು ನಮ್ಮಲ್ಲಿ ತುಂಬಾ ಹಿಂದಿನಿಂದಲೂ ಪ್ರಚಲಿತವಿದೆಯೆಂಬುದನ್ನು ನೆನಪುಮಾಡಲಿಕ್ಕಾಗಿ ಮಾತ್ರ ಆ ಮಾತನ್ನು ಉಲ್ಲೇಖಿಸಿದ್ದು. ಭಾರತೀಯರ ನಂಬಿಕೆಯು, ಸಂಸ್ಕೃತಿಯು ಒಂದು ಚಿಕ್ಕ ಹೊಳಹನ್ನು ಶಾಕುಂತಲದ ಆ ಮಾತು ಒದಗಿಬಲ್ಲದು ಅಷ್ಟೇ. ಈ ದೃಷ್ಟಿ ಯಿಂದಕಾವ್ಯದ ವಾಕ್ಯವಾದರೇನಾಯಿತು ? ಶಾಕುಂತಲದ ಆ ಮಾತು ಇಲ್ಲಿಗೆ ಅನ್ಯೌ ಚಿತವೇನೂ ಅಲ್ಲವೆಂಬುದು ಔಚಿತ್ಯದೃಷ್ಟಿ ; (ಕಣ್ವರು ಶಕುಂತಲೆಯು ತಂದೆಯಲ್ಲ. ಹಾಗೂ ಅಲ್ಲಿ ಹೇಳಿದ್ದು ಋತುಶಾಂತಿಯ ವಿಚಾರವೂ ಅಲ್ಲವೆಂಬುದು ಮಾತ್ರ ಒಪ್ಪ ತಕ್ಕ ವಿಚಾರ ।)

4. ಅಷ್ಟೋ ಇಷ್ಟೋ ಮಾಡಿದರೆಂಬುದೇ ಕವಿಯ ನಂಬಿಕೆ.

5. ಎರಡೂ ಹೌದು.

6. 'ಪ್ರತಿ ಕೂಲದೈವಶಮನ'ಕ್ಕಾಗಿ ಹೊರಟವರು 'ಪ್ರತಿಕೂಲ'ವನ್ನೇ ಆಹ್ವಾನಿಸಿರಲಾರರೆಂದು ನನ್ನ ಅನಿಸಿಕೆ.

7. ಶಾಕುಂತಲ ನಾಟಕದ ಬೆಳವಣಿಗೆ, ಸಂವಿಧಾನಗಳು ಈಗಿದ್ದ ರೀತಿಯಲ್ಲಿ ಇರುತ್ತಿರಲಿಲ್ಲ. ಶಿಷ್ಯರೂ ಶಕುಂತಲೆಯ ಹಿತಚಿಂತಕರಾದರೂ ಈ ವಿಷಯದಲ್ಲಿ ಅವರು ಕಣ್ವರ ಅನಂತರದವರಾಗುತ್ತಾರೆ.

8. ಪ್ರಥಮರಜೋದರ್ಶನಕಾಲದಲ್ಲಿ ಹುಡುಗಿಗೆ ಸಂಭವಿಸುವ ದೋಷಗಳು ಪತಿಗೂ ಪತಿಕುಲಕ್ಕೂ ಸಂಬಂಧಪಡುತ್ತವೆಯೇ ಹೊರತು ತಂದೆಗೂ ತಂದೆಯ ಕುಲಕ್ಕೂ ಯಾವ ರೀತಿಯಿಂದಲೂ ಸಂಬಂಧ ಪಡುವದಿಲ್ಲೆಂದು ಮಾನ್ಯ ಶಾಸ್ತ್ರಿಗಳು ತಮ್ಮ ಲೇಖನದಲ್ಲಿ ಸಾರಿಹೇಳಿದ್ದಾರೆ. ಈಗ ಈ ದೋಷವು ಮಾತ್ರ ತಂದೆಗೂ ಸಂಬಂಧ ಪಡುತ್ತದೆಂದು ಒಪ್ಪುತ್ತಾರೆಯೇ ?

9. ಆಗಲಿ, ಪ್ರಯತ್ನಿಸುವೆನು.

'ಬಾಧಕ ಪ್ರಮಾಣಾಂತರವು ಉಪಸ್ಥಿತವಾಗುವವರೆಗೆ ಪೂರ್ವೋತ್ಪನ್ನವಾದ ಆ ವಿಷಯಕ ಜ್ಞಾನವು ಪ್ರಮಾಣವೇಸರಿ' ಎಂದು ಗೃಹೀತವಾಗಿರುದರ ಪ್ರಕಾರ ಮಾನ್ಯ ಶಾಸ್ತ್ರಿಗಳು ಈ ವಚನವನ್ನು ಒದಗಿಸುವಂತೆ ಕೇಳುತ್ತಿರುವದರಿಂದ ಇದೀಗ ಅವರೂ ಕೂಡ ಋತುಶಾಂತಿಯಲ್ಲಿ ತಂದೆಗೆ ಕರ್ತೃತ್ವಾಧಿಕಾರ ವಿದೆಯೆಂದೇ ಒಪ್ಪಿದ್ದಾರೆಂಬುದು ಖಚಿತ, ಕಾರಣ 'ತಂದೆಗೆ ಅಧಿಕಾರವಿಲ್ಲ' ಎಂಬ ಬಗ್ಗೆ ಸ್ಪಷ್ಟವಾದ ಪ್ರಮಾಣ ವಚನವು ದೊರಕುವವರೆಗೆ 'ವಿದ್ವಾನ್ ಶ್ರೀ ರಾಮಚಂದ್ರ ಶಾಸ್ತ್ರಿಗಳು ಸೂರಿ ಅವರೂ ಕೂಡ ವಿವಾಹ ಪೂರ್ವದಲ್ಲಿ ಕನ್ಯೆಯು ಋತುಮತಿಯಾದರೆ ಅಲ್ಲಿ ಪ್ರಸಕ್ತವಾದ ಋತುಶಾಂತಿಯಲ್ಲಿ ತಂದೆಗೆ ಕರ್ತೃತ್ವಾಧಿಕಾರವಿದೆಯೆಂದು ಒಪ್ಪುತ್ತಾರೆ' ಎಂದು ಈ ಮೂಲಕ ವಿದ್ವತ್ಸಮಾಜಕ್ಕೆ ತಿಳಿಯ ಪಡಿಸುತ್ತಿದ್ದೇನೆ.

10. ಮುಖ್ಯ ಕರ್ತೃವು ತೀರಿಕೊಂಡಿದ್ದರೆ ಅಥವಾ ಅನುಷ್ಠಾನ ಮಾಡಲು ಅಶಕ್ತನಾದರೆ-ಗೌಣಕರ್ತೃವನ್ನು ತೆಗೆದುಕೊಳ್ಳಲು ಶಾಸ್ತ್ರಾನುಜ್ಞೆ ಇದೆ. ಹುಡುಗಿಯ ತಂದೆಯು ತೀರಿಕೊಂಡಾಗ ಅವಳನ್ನು ಧಾರೆಯೆರೆದು ಕೊಡುವದರಲ್ಲಿ ಯಾರು ಅಧಿಕಾರಿಯೋ ಅವನು ಅವಳ ವಿವಾಹ ಪೂರ್ವದ ಋತುಶಾಂತಿಯಲ್ಲಿ ಕರ್ತೃವಾಗ ಬಹುದು. ಕಾರಣ ಇಲ್ಲಿ ಅಣ್ಣ ಅಲ್ಲ, ಮಾವ ಅಲ್ಲ, ಎಂಬ ಪರ್ಯುದಾಸಕ್ಕೆ ಪ್ರಸಕ್ತಿಯೇ ಇಲ್ಲ. ಹುಡುಗಿಯನ್ನು ಧಾರೆಯೆರೆದು ಕೊಡಲು ಜ್ಞಾತಿಗಳಾರೂ ಇಲ್ಲದಿದ್ದರೆ 'ಅಸಗೋತ್ರೋಽಪಿ ವಾ ಕ್ವಚಿತ್' ಧಾರೆಯೆರೆದು ಕೊಡಬಹುದೆಂದು ಅನುಜ್ಞೆಯಿದೆ. ಈ ಅಸಗೋತ್ರನು ಆ ಹುಡುಗಿಯ ವಿಷಯದಲ್ಲಿ 'ಹಿತಬಯಸು ವವ'ನಲ್ಲದಿದ್ದರೆ ಮಾತ್ರಾರು ?

11. ಎರಡೂ ಅಲ್ಲ, ಕರ್ತೃ ಅಷ್ಟೇ.

12. ವಿವಾಹಕ್ಕೆ ಮೊದಲು ಹುಡುಗಿಗೆ ಋತುಶಾಂತಿಯಾಗದಿದ್ದಲ್ಲಿ ವಿವಾಹದ ನಂತರವಾದರೂ ಮಾಡುತ್ತಾರಷ್ಟೇ ! ಆಗ ಪತಿಯೇ ಕರ್ತೃವೆಂಬುದು ಕ್ರಮ ಪ್ರಾಪ್ತವೇ ಆಗಿದೆ.

13. ಹೌದು.

14. 'ಯಾವುದೂ ಪ್ರಕೃತೋಪಯೋಗಿಯಾಗಿಲ್ಲ' ಎನ್ನುವ ಬದಲು 'ದಾಕ್ಷಿಣ್ಯ'ದಿಂದ 'ಕೆಲವು' ಎಂದು ಹೇಳಿಬಿಟ್ಟೆ !

15. ಇಲ್ಲೇ ಮೇಲೆ ಉಲ್ಲೇಖಿಸಿದ ನನ್ನ ಆ ಪ್ರತಿಕ್ರಿಯೆಯನ್ನು ಇನ್ನೊಮ್ಮೆ ಪರಿಶೀಲಿಸೋಣಾಗಲಿ. "ಅಧಿಕಾರಿ ನಿರ್ಣಯಕ್ಕೆ ಯಾವ ಅಧಿಕರಣ ? ಎಂಬ ಪ್ರಶ್ನೆ ಅಲ್ಲಿದೆಯೇ ?

"ವಾದಿ–ಪ್ರತಿವಾದಿಗಳಿಬ್ಬರೂ ತಮ್ಮ ತಮ್ಮ ವಾದವನ್ನು ಸ್ಥಿರೀಕರಿಸಲು ಪೂರ್ವಮೀಮಾಂಸಾ ಶಾಸ್ತ್ರದ ಅಧಿಕರಣಗಳ ಪೈಕಿ ಯಾವುವು ಇಲ್ಲಿಗೆ ಅನ್ವಯಿಸುತ್ತ ದೆಂಬುದನ್ನು ಪರಿಶೀಲಿಸಿ ಸಂದರ್ಭಕ್ಕೆ ತಕ್ಕಂತೆ ಅಳವಡಿಸಬೇಕು' ಎಂಬುದು ನನ್ನ ಮಾತು. "ವಾದಿ–ಪ್ರತಿವಾದಿಗಳಿಬ್ಬರೂ' ಎಂಬ ಮಾತನ್ನು ಗಮನಿಸಬೇಕು. ಇಬ್ಬರೂ ತಮಗೆ ಉಚಿತವೆನಿಸಿದ ನ್ಯಾಯಗಳನ್ನು ಆರಿಸಿಕೊಂಡು ಪ್ರಕೃತಕ್ಕೆ ಹೊಂದು ವಂತೆ ಅಧಿಕರಣಗಳನ್ನು ರಚಿಸಿ ತಮ್ಮ ತಮ್ಮ ವಾದಗಳನ್ನು ಮಂಡಿಸಿದಾಗ ಯಾರ "ನ್ಯಾಯ"ವು ಪ್ರಬಲವೋ ಅವರ ಪಕ್ಷ ಇಲ್ಲಿ ನಿಲ್ಲುತ್ತದೆ. ಯಾರ "ನ್ಯಾಯ" ದುರ್ಬಲವೋ ಆ ಪಕ್ಷವು ಸದ್ದಿಲ್ಲದೇ ಇಲ್ಲಿಂದ ಕಾಲುಕೀಳುತ್ತದೆಂಬ ಆಶಯದಿಂದ ಪ್ರಕೃತೋಚಿತವಾದ ಪೂರ್ವಮೀಮಾಂಸಾಶಾಸ್ತ್ರದ ನ್ಯಾಯಗಳನ್ನು – ಅಧಿಕರಣ ಗಳನ್ನು – ಉದಾಹರಿಸಲು ಕೇಳಿದ್ದು ಅಷ್ಟೇ,

ಗೌಣಮುಖ್ಯಉಭಯಸಾಧಾರಣವಾದ ಪುರುಷಾರ್ಥವು ಪ್ರವೃತ್ತಿ ಪ್ರಯೋಜಕ ವೆಂದಿಟ್ಟುಕೊಂಡಾಗ ಋತುಶಾಂತಿಯಲ್ಲಿ ತಂದೆಗೂ ಪ್ರವೃತ್ತಿ ಉಪಪನ್ನವೇ ಆಗುತ್ತದೆ.

ಯದವಗತಂ ಸತ್ ಸ್ವವೃತ್ತಿತಯಾ ಇಷ್ಯತೇ ತತ್ ಪ್ರಯೋಜನಂ'-ಎಂಬುದಕ್ಕೆ ಪೂರಕವಾಗಿ ಈ ಕೆಳಗಿನ ವಚನಗಳನ್ನು ಸೇರಿಸಿಕೊಳ್ಳಬಹುದು.

ಭೋಕ್ತಾ ಚ ಉತ್ಸರ್ಗತೋ ವಿಧಿವಶಾತ್ ಕಾಮನಾವಶಾತ್ ಆತ್ಮನೇಪದವ ಶಾಚ್ಚ ಕರ್ತೈವ । ಪ್ರಮಾಣಸತ್ವೇ ತ್ವನ್ಯಃ ।

—ಶ್ರೀಖಂಡದೇವರ ಭಾಟ್ಟದೀಪಿಕಾ : ೩. ೧. ೩. (ವೈಶ್ವಾನರೇಷ್ಟ್ಯಧಿಕರಣ ನ್ಯಾಯಾದಯೋಽತ್ರ ಪ್ರಮಾಣ ಮಿತ್ಯನುಸಂಧೇಯಂ) —ಸಂ

ಯದಪಿ ಪರಾರ್ಥಂ ಕಾಮ್ಯತೇ, ತದಪಿ ಪರಂಪರಯಾ ಸ್ವಾರ್ಥಮೇವ ॥
—ಶ್ರೀಮತ್ ಪಾರ್ಥಸಾರಥಿ ಮಿಶ್ರರ ಶಾಸ್ತ್ರದೀಪಿಕಾ : ೩. ೧. ೩.

೦ ೦ ೦ ೦

ಇಲ್ಲಿ ನನ್ನ ಉದ್ದೇಶವೂ ಕೂಡ ಕೇವಲ ವಿಷಯವಿವೇಚನೆಯೇ, ಆದರದ ಸ್ಥಾನದಲ್ಲಿ ಬೇಸರಕ್ಕೆ ಎಡೆಯೆಲ್ಲಿ ಬಂತು ?

ಈ ಮೇಲಿನ ನನ್ನ ಅನಿಸಿಕೆಗಳಲ್ಲಿನ ಅಶಾಸ್ತ್ರೀಯತೆ, ಅಪ್ರಾಮಾಣಿಕತೆ, ಹಾಗೂ ಅನೌಚಿತ್ಯಗಳನ್ನು ಕೂಲಂಕಷವಾಗಿ ಹೊರಗೆಡಹುವಂತಾಗಲೆಂದು ನಾಡಿನ ಮಾನ್ಯವಿದ್ವಾಂಸರನ್ನು ಕೇಳಿಕೊಳ್ಳುತ್ತೇನೆ.

—ಯ. ಕೃಷ್ಣ ಶರ್ಮಾ
3, ಶ್ರೀ ಸುಬ್ರಹ್ಮಣ್ಯಸ್ವಾಮಿ ಮಂದಿರಂ
ವಿಶ್ವೇಶ್ವರಪುರಂ
ಬೆಂಗಳೂರು-560004

ಕ್ರೋಧನ ಸಂ,
ಅಧಿಕ ಶ್ರಾವಣ ಶುಕ್ಲ ಏಕಾದಶೀ
ಭಾನುವಾರ,
28-7-85